ಸುಧಾಕರ ಕರ್ಣಾಟಕ ಗ್ರಂಥಾವಳಿ

ಗ್ರಂಥ ೨

ಶ್ರೀಕೃಷ್ಣ

# ಪಾರಿಜಾತ

## ( ನಾಟಕ )



ಬೆಳ್ಳಾವೆ ನರಹರಿಶಾಸ್ತ್ರಿ

---

ಬೆಳ್ಳಾವೆ ಪುಸ್ತಕಾಲಯ

ಬೆಂಗಳೂರು ನಗರ

[illegible]

ಕ್ರಯ ೧೨ ಆಣೆ.

**ಈ ಗ್ರಂಥಕರ್ತರ ಇತರ ಗ್ರಂಥ.**

ನಾಟಕ.

ಶ್ರೀಕೃಷ್ಣಗಾರುಡಿ

ಶ್ರೀಕೃಷ್ಣಲೀಲಾವಿನೋದ

ಕಂಸವಧ

ಕಬೀರದಾಸ

ಭೋಜಕಾಳಿದಾಸ

ಭೋಜಕುಮಾರ

---

ರಾಜಭಕ್ತಿಕಾವ್ಯಂ (ಚಂಪು)

ರತ್ನಕುಂಡಲ (ಕಥೆ)

ಕರ್ಣಾಟಗೀತಮಂಜರಿ (ಹಾಡು)

ಶಾಲಾಸಂವಿಧಾನ }
ನೀತ್ಯನುಶಾಸನ } ಉಪಾಧ್ಯಾಯರಿಗೆ

ವಿಜಯವಿಲಾಸ

(ಕಾದಂಬರಿ ಮುದ್ರಣದಲ್ಲಿದೆ)



೧೯೩೮

ಪ್ರಕಾಶಕರು —

**ಬೆಳ್ಳಾವೆ ಪುಸ್ತಕಾಲಯ**

ಬಳೇಪೇಟೆ, ಬೆಂಗಳೂರು ಸಿಟಿ.

# ಮುನ್ನುಡಿ

ಶ್ರೀಮದ್ಭಾಗವತ ದಶಮಸ್ಕಂಧದಲ್ಲಿ ಉಕ್ತವಾಗಿರುವ "ಪಾರಿಜಾತಾಪಹರಣ" ದ ಕಥಾಭಾಗವೇ ಈ ನಾಟಕದ ವಸ್ತು. ಮಹಾ ಕವಿರುದ್ರಭಟ್ಟನು ಜಗನ್ನಾಥವಿಜಯ ಗ್ರಂಥದಲ್ಲಿ, ಈ ಭಾಗವನ್ನು ವಸ್ತುಕ್ರಮದಿಂದ ಚಿತ್ರಿಸಿರುವ ಮಾರ್ಗವನ್ನು ಸ್ವಲ್ಪ ಮಟ್ಟಿಗೆ ಅನುಸರಿಸಿ, ಅದರ ಜೊತೆಗೆ ನಾಟಕಾನುಕೂಲವಾದ ಕೆಲವು ಪಾತ್ರ ಸಂದರ್ಭ ಸಂವಿಧಾನಗಳನ್ನು ಕಲ್ಪಿಸಿ ಕಥೆಯನ್ನು ಇನ್ನೂ ಮುಂದುವರಿಸಿ, ಈ ನಾಟಕವನ್ನು ರಂಗ ಪ್ರದರ್ಶನಕ್ಕೆ ತಕ್ಕಂತೆ ರಚಿಸಿರುವೆನು. ಪುರಾಣಕಥೆಯೊಂದರಿಂದ ಐತಿಹಾಸಿಕ ಸಾಮಾಜಿಕ ಭಾವಗಳನ್ನು ಇದರಲ್ಲಿ ಬಹುಮಟ್ಟಿಗೆ ನಿರೀಕ್ಷಿಸಲಾಗದೆಂದು ವಾಚಕರಿಗೆ ನಾನು ಹೊಸದಾಗಿ ವಿಜ್ಞಾಪಿಸಬೇಕಾಗಿಲ್ಲ. ಮುಖ್ಯವಾಗಿ, ಶ್ರೀಕೃಷ್ಣಪರಮಾತ್ಮನು, ಲೋಕಾಂತರಗಳಲ್ಲಿಯೂ ಸಹ, ಸರ್ವಸ್ವತಂತ್ರನಾದ ಸರ್ವಶಕ್ತಪರಮಾತ್ಮನೆಂದಲೂ, ಸಾಮಾನ್ಯಮಾನವರು ಮಾತ್ರವಲ್ಲದೆ, ಇಂದ್ರಾದಿದೇವತೆಗಳೂ ಮಹಾಯೋಗಸಿದ್ಧರೆನಿಸಿದ ನಾರದಾದಿ ಮಹಾಮುನಿಗಳೂ ಸಹ ಆತನ ಕೈಯೊಳಗಿನ ಸೂತ್ರದ ಬೊಂಬೆಗಳಂತಿರುವರೆಂಬುದನ್ನೂ ತೋರ್ಪಡಿಸಿ, ಆ ಪರಮಾತ್ಮನು, ಮಾರ್ಗಭ್ರಷ್ಟರಾದವರಿಗೆ [illegible] ಶಿಕ್ಷೆಗಳನ್ನು ನಿಷ್ಪಕ್ಷಪಾತವಾಗಿ ಮಾಡಿ, ಕಡೆಗೆ ಅವರನ್ನು ಅನುಗ್ರಹಿಸುವನೆಂಬುದನ್ನು ವ್ಯಕ್ತಗೊಳಿಸಿ, ದೃಶ್ಯವಿಷಯಗಳಿಂದ ನೀತಿಯು ತಾನಾಗಿ ಗೋಚರಿಸುವಂತೆ ಮಾಡಬೇಕೆಂಬುದೇ ಈ ನಾಟಕ ರಚನೆಯಲ್ಲಿ ನನ್ನ ಮುಖ್ಯೋದ್ದೇಶವಾಗಿರುವುದು.

ಈ ಕಥೆಯಲ್ಲಿ ಹೇಳಿರುವಂತೆ, ಮಹಾಯೋಗಿಯಾದ ನಾರದಮುನಿಗೂ ಸಹ ಕಾಮಬಾಣಪ್ರಹಾರದಿಂದ ಬುದ್ಧಿಪಲ್ಲಟವಾಯಿತೆಂಬುದು ಅಸಂಭವವೆಂದು ಕೆಲವರು ಅಭಿಪ್ರಾಯಪಡಬಹುದು. ಆದರೆ ಶ್ರೀಕೃಷ್ಣಪರಮಾತ್ಮನ ಸಂಕಲ್ಪದಿಂದ ಈ ರೀತಿಯಾಗಿರುವುದೆಂದು ಮಾತ್ರವೇ ಇದರಲ್ಲಿ ಸ್ಫುಟವಾಗಿ ಹೇಳಿರುವುದಲ್ಲದೆ, ನಾರದಮುನಿಯು ಸ್ವಭಾವವಾಗಿ ಕಾಮವಿಕಾರಕ್ಕೆ ಒಳಗಾಗತಕ್ಕ ಸಾಮಾನ್ಯಪುರುಷನೆಂದು, ನಾರದನ ವ್ಯಕ್ತಿಗೇ ಕಳಂಕವನ್ನಾರೋಪಿಸಿಲ್ಲ. ನಾರದನು ಕಾಮವಿಕಾರಕ್ಕೆ ಸಿಕ್ಕತಕ್ಕವನೇ ಅಲ್ಲವೆಂದು ಭಾವಿಸುವ ಜನರು, ನಾರದನಂತಹ ಅನೇಕಮಂದಿಯೋಗಿಗಳ ಹೃದಯದಲ್ಲಿ ನಿಂತು ಜಗನ್ನಾಟಕಸೂತ್ರವನ್ನು ಹಿಡಿದಿರುವ ಶ್ರೀಮನ್ನಾರಾಯಣಸ್ವರೂಪನಾದ ಶ್ರೀಕೃಷ್ಣಪರಮಾತ್ಮನು, ತನ್ನ ಸಂಕಲ್ಪಮಾತ್ರದಿಂದ ಎಂಥವರನ್ನು ಯಾವ ರೀತಿಯಿಂದ ಬೇಕಾದರೂ ಭ್ರಾಂತಿಗೊಳಿಸಿ ಕುಣಿಸಬಲ್ಲ ಸರ್ವಶಕ್ತನಾಗಿರುವನೆಂಬುದನ್ನು ಒಪ್ಪಲೇಬೇಕಷ್ಟೆ! ಒಂದೆ

ನಾರದನು ಶ್ರೀಮನ್ನಾರಾಯಣನ ಮಾಯೆಯಿಂದ ಸ್ತ್ರೀ ರೂಪವನ್ನು ಹೊಂದಿದ್ದನೆಂಬ ಪುರಾಣಕಥೆಯೂ ಉಂಟಲ್ಲವೇ ! [ಕರ್ಣಾಟಕ ಸಾಹಿತ್ಯಪರಿಷತ್ತಿನಿಂದ ಪ್ರಕಟಿತವಾಗಿರುವ ಸೋಮೇಶ್ವರ ಶತಕಪ್ರತಿಯ ೧೨೫ನೆಯ ಪುಟದಲ್ಲಿ ೨೬ ನೆಯ ಕಥೆ.]

ಜಿತೇಂದ್ರಿಯರೂ ತಪಸ್ವಿಗಳೂ ಆದ ಮಹಾ ಪುರುಷರೂ ಸಹ ದೈವಮಾಯೆಗೆ ಸಿಕ್ಕಿ ನರಳಿರುವರೆಂಬಲ್ಲಿ, ಇನ್ನು ಸಾಮಾನ್ಯಜನರು ಅಹಂಭಾವದಿಂದ ಬೀಗಿ ವರ್ತಿಸಿದರೆ, ಅವರು ಇನ್ನೆಷ್ಟು ದುಷ್ಫಲಾನುಭವಿಗಳಾಗುವರೆಂಬುದನ್ನು, ಊಹಿಸಿಕೊಳ್ಳುವಂತೆ ಕಥೆಯು. ವಾಚಕರ ಮತ್ತು ಪ್ರೇಕ್ಷಕರ ಮನಸ್ಸಿನ ಮೇಲೆ ಪ್ರಬಲ ಪರಿಣಾಮವಾಗಬೇಕೆಂಬುದೇ ಇಂಥ ವಿಚಿತ್ರಕಥೆಗಳನ್ನು ಆರಿಸಿ ಅಥವಾ ಇಂಥ ಸಂವಿಧಾನಗಳನ್ನು ಚಿತ್ರಿಸಿ ನಾಟಕ ರೂಪದಲ್ಲಿ ತೋರ್ಪಡಿಸುವುದರ ಮುಖ್ಯೋದ್ದೇಶವು ಆದಕಾರಣ ಈ ದೃಷ್ಟಿಯಿಂದ. ಈ ನಾಟಕದಲ್ಲಿನ ನಾರದನ ಚಿತ್ರವು ದೋಷಾವಹವಲ್ಲವೆಂದು ವಾಚಕರ ಚಿತ್ತಕ್ಕೆ ಬರಬಹುದೆಂದು ನಂಬಿದ್ದೇನೆ

ಈ ಶ್ರೀಕೃಷ್ಣ ಪಾರಿಜಾತ ನಾಟಕದಲ್ಲಿಯೂ ಮತ್ತು ಇದರ ಹಿಂದೆ ಮುದ್ರಿತವಾಗಿರುವ "ಶ್ರೀ ಕೃಷ್ಣಗಾರುಡಿ" ನಾಟಕದಲ್ಲಿಯೂ ಸಹ "ಮಮಮಾಯಾ ದುರತ್ಯಯಾ" ಎಂದು ಹೇಳಿರುವ ಶ್ರೀಕೃಷ್ಣಪರಮಾತ್ಮನ ಮಹಿಮೆಯನ್ನು ವ್ಯಂಗ್ಯವಾಗಿ ತೋರ್ಪಡಿಸಬೇಕೆಂಬುದೇ ಮುಖ್ಯವಾದ ಉದ್ದೇಶವು ವಾಚಕರು ಇದನ್ನು ಗಮನದಲ್ಲಿಟ್ಟು, ಈ ನಾಟಕಗಳನ್ನೋದಿದರೆ, ಲೇಖಕನ ಮನಸ್ಸಿನ ಭಾವನೆಗಳು ವ್ಯಕ್ತಪಡುವವು. ಗುಣೈಕಪಕ್ಷಪಾತಿಗಳಾದ ರಸಿಕಜನರು ಗ್ರಂಥಕರ್ತನ ಧ್ಯೇಯಗಳನ್ನು ಚಿತ್ತಕ್ಕೆ ತಂದು ಇದರಲ್ಲಿ ದೊರೆಯಬಹುದಾದ ಭಗವಲ್ಲೀಲಾಮೃತಪಾನದಿಂದ ಸಂತುಷ್ಟರಾದರೆ ನಾನು ಕೃತಾರ್ಥನಾದೆನೆಂದು ಸಂತೋಷಿಸಿ ಅವರಿಗೆ ನನ್ನ ವಂದನೆಗಳನ್ನು ಸಮರ್ಪಿಸುವೆನು

ಈ ನಾಟಕವನ್ನು ಗುಬ್ಬಿ ಶ್ರೀ ಚೆನ್ನಬಸವೇಶ್ವರಸ್ವಾಮಿ ನಾಟಕ ಸಂಘಗಳ ಮಾಲೀಕರಾದ ವಿನೋದ ರತ್ನಾಕರ, ನಾಟ್ಯಕಲಾನಿಧಿ ಮ|| ರಾ|| ಶ್ರೀ|| ಜಿ. ಹೆಚ್. ವೀರಣ್ಣನವರು, ತಮ್ಮ "ಬಾಲಕಲಾವಿವರ್ಧಿನೀ ನಾಟಕಸಂಘ" ದಿಂದ ರಂಗದಲ್ಲಿ ಪ್ರದರ್ಶನ ಮಾಡಿ, ನನಗೆ ನಾಟಕಲೇಖನದಲ್ಲಿ ಉತ್ತೇಜನವನ್ನು ಕೊಟ್ಟಿದ್ದಕ್ಕಾಗಿ ಅವರಿಗೆ ನಾನು ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ

ಪ್ರಜೋತ್ಪತ್ತಿ ಸಂ|| ಫಾಲ್ಗುಣ ಶುದ್ಧ ೯ |
ಗುರುವಾರ
೧೭-೩-೩೨ ಬೆಂಗಳೂರು ನಗರ. |

**ಬೆಳ್ಳಾವೆ ನರಹರಿಶಾಸ್ತ್ರಿ.**

**ನಾರದ** — ಹ (ಪ್ರವೇಶಿಸುವನು.) (ನರ್ತಕಿಯರು ನಾಟ್ಯವನ್ನು ನಿಲ್ಲಿಸುವರು.)

**ದೇವೇಂದ್ರ**—ನಾಟ್ಯವನ್ನೇತಕ್ಕೆ ನಿಲ್ಲಿಸಿದಿರಿ? ನಡೆಯಲಿ.

**ಬೃಹಸ್ಪತಿ**—ಮಹೇಂದ್ರಾ! ಪೂಜ್ಯರಾದ ನಾರದಮಹರ್ಷಿಗಳು ದಯಮಾಡಿಸಿರುವರು.

**ದೇವೇಂದ್ರ**—(ನೋಡಿ) ಅದರೇನು? ಗಾನನರ್ತನಗಳನ್ನೇತಕ್ಕೆ ನಿಲ್ಲಿಸಬೇಕು? (ನಾರದನನ್ನು ನೋಡಿ) ಪೂಜ್ಯರೇ, ದಯಮಾಡಿ. (ನರ್ತಕಿಯರ ಕಡೆ ನೋಡುವನು.)

**ನಾರದ**—(ಆಗ) ಅಹಾ! ವಿಘ್ನನಿಮಗ್ನನಾದ ದೇವೇಂದ್ರನು ಎಷ್ಟು ಮತ್ತನಾಗಿರುವನು! ನಾನು ಬಂದಾಗಲೆಲ್ಲವೂ ಅರ್ಘ್ಯಪಾದ್ಯಾದಿಗಳಿಂದ ನನ್ನನ್ನು ಸತ್ಕರಿಸಿ ಉಪಚರಿಸುತ್ತಿದ್ದವನು, ಈಗ ಸರಿಯಾಗಿ ಕಣ್ಣೆತ್ತಿಯೂ ನೋಡದೆ, "ದಯಮಾಡಿ" ಎಂಬ ಶಬ್ದಮಾತ್ರದಿಂದ ಸತ್ಕರಿಸಿದನಲ್ಲಾ! ನಾನು ಹಿಂದಕ್ಕೆ ದಯಮಾಡಬೇಕೆಂದಾತನ ಅಭಿಪ್ರಾಯವೋ! (ಆಲೋಚಿಸಿ) ಇರಲಿ! ಆತನು ನನ್ನನ್ನು ಉದಾಸೀನ ಮಾಡಿದರೆ ನನಗಪ್ಪಂದ ಕುಂದಕವೇನು!

**ಬೃಹಸ್ಪತಿ**—(ಪೀಠವನು ತೋರಿಸುವನು; ನಾರದನು ಬಂದು ಕುಳಿತುಕೊಳ್ಳುವನು)

**ದೇವೇಂದ್ರ**—(ನರ್ತಕಿಯರನ್ನು ನೋಡಿ) ಏತಕ್ಕೆ ಸ್ತಬ್ಧರಾದಿರಿ? ಮುನಿಗಳ ಮುಖವನ್ನು ನೋಡಿ ಮುಗ್ಧೆಯರಾಗಿ ನಿಂದಿರುವಿರಲ್ಲಾ! ಚೆನ್ನಾಯಿತು! (ಆಗ) ನನ್ನ ಆನಂದ ಪ್ರವಾಹಕ್ಕೆ ಅಣೆಗಟ್ಟಿದಂತೆ ಬಂದನಲ್ಲಾ ಈ ಮುನಿಯು! (ಪ್ರಕಾಶಂ) ಎಲೌ! ರಂಭೋರ್ವಶಿಯರೇ! ನಡೆಯಲಿ! ಗಾನನರ್ತನಗಳು ನಡೆಯಲಿ, ಸಂಗೀತ ಪ್ರವಾಹವು ಉಕ್ಕಿ ಹರಿಯಲಿ! ನಿಲ್ಲಿಸಬೇಡಿ: ಇಂತಹ ಆನಂದಕರವಾದ ಸಮಯವನ್ನು ವ್ಯರ್ಥಮಾಡಲಾಗದು.

**ನರ್ತಕಿಯರು**—ಅಪ್ಪಣೆ. (ನಾಟ್ಯಮಾಡಿ ವಂದಿಸಿ ಹೋಗುವರು.)

**ನಾರದ**—ಮಹೇಂದ್ರಾ, ಇಂತಹ ಮಹಾ ವಿಭವವಿಲಾಸಗಳಿಂದೊಪ್ಪುವ ನಿನ್ನನ್ನು ನೋಡಿ ನನಗತ್ಯಾನಂದವಾಯಿತು.

**ಇಂದ್ರ**—ಬಹಳ ಸಂತೋಷ. ನಾನೂ ಸಹ. ಳ

**ಕಂ॥** ಈ ನವಗಾಯನ ನರ್ತನ |
ದಾನಂದಾಬ್ಧಿಯೊಳೆ ಮುಳುಗಿ ಪರವಶನಾದೆಂ ॥
ಈ ನನ್ನ ಪ್ರಾಂತಿವಿಭವದೊ !
ಖಾನಂದದಸಮಾನಸಿರ್ದಪೆ ಮೂಜಗದೊಳ್ ! ॥ ೨ ॥

ನೂರು ಅಶ್ವಮೇಧಯಾಗಗಳನ್ನು ಮಾಡಿ ಪಡೆಯಬೇಕಾದ ಈ ನನ್ನ ದೇವೇಂದ್ರ ಪದವಿಯು ಸಾಮಾನ್ಯವಾದುದೇ! ಈ ವೈಭವಕ್ಕೆ ಸಮಾನ ವುಂಟೇ! ಈ ಸುಖಕ್ಕೆ ಸಾಮ್ಯವುಂಟೇ! ಆಹಾ! ಈ ಮಹೇಂದ್ರನಲ್ಲದೇ ಗುಣದಲ್ಲಿಯೂ ವಿಭವದಲ್ಲಿಯೂ ವಿಕ್ರಮದಲ್ಲಿಯೂ ಸಮಾನರಹಿತನು!

**ನಾರದ**—ಮಹೇಂದ್ರಾ! ಏನೆಂದು ಹೇಳಿದೆ? ಗುಣದಲ್ಲಿಯೂ, ವಿಕ್ರಮ ದಲ್ಲಿಯೂ ನೀನು ಸಮಾನ ರಹಿತನೆ?

**ಇಂದ್ರ**—ನಾರದರೇ, ಆ ವಿಷಯದಲ್ಲಿ ಸಂದೇಹವೇನು? ಸ್ವರ್ಗ ಮರ್ತ್ಯ ಪಾತಾಳಲೋಕಗಳಲ್ಲಿ ಸ್ವರ್ಗಲೋಕವು ಹೇಗೆ ಶ್ರೇಷ್ಠವೋ ಅದರಂತೆ ದೇವ ಪುರುಷರಲ್ಲಿ ಸ್ವರ್ಗಾಧಿಪತಿಯಾದ ನಾನು ಶ್ರೇಷ್ಠನಲ್ಲವೋ? ಅಂತಹ ಅಸಮಾನವಾದ ವಿಕ್ರಮವೂ ವಿಭವವೂ ಗುಣವೂ ನನ್ನಲ್ಲಿ ಇಲ್ಲದಿದ್ದರೆ ನನಗೆ ಈ ಇಂದ್ರಪದವಿಯು ಲಭಿಸುತ್ತಿತ್ತೇ? ಬಲಿಷ್ಠ ನೆಂದೂ, ಸಾಂದ್ರವಿಭವನೆಂದೂ, ಸುಬುಧಸೇವಿತನೆಂದೂ, ತ್ರಿಲೋಕವೂ ನನ್ನನ್ನು ಹೊಗಳುತ್ತಿದ್ದಿತೋ?

**ನಾರದ**—ಕೇಳು, ಪೂರ್ವಾರ್ಜಿತ ಪುಣ್ಯವಿಶೇಷದಿಂದ ಪದವಿಯೂ, ವೈಭವವೂ ಲಭಿಸುವುದು ಸಹಜ. ಪದವಿಗೆ ತಕ್ಕ ಪರಾಕ್ರಮವೂ ಗುಣವೂ ಎಲ್ಲರಲ್ಲಿಯೂ ಇರುವುವೆಂದು ಹೇಳಲಾಗುವುದಿಲ್ಲ. ಆ ಪದವಿಯನ್ನೂ ವೈಭವವನ್ನೂ ವಿವೇಕದಿಂದ, ನಿರಹಂಕಾರಿಯಾಗಿ ಉಪಯೋಗಿಸಿ ತನ್ನ ಬಲವನ್ನೂ, ವಿದ್ಯೆಯನ್ನೂ, ಐಶ್ವರ್ಯವನ್ನೂ ಪರೋಪಕಾರಕ್ಕೂ ಲೋಕೋದ್ಧಾರಕ್ಕೂ, ದೀನರಕ್ಷಣೆಗೂ, ಉಪಯೋಗಿಸಿ, ಸಾರ್ಥಕ

**ನಾರದ**—ಓ (ಪ್ರವೇಶಿಸುವನು.) (ನರ್ತಕಿಯರು ನಾಟ್ಯವನ್ನು ನಿಲ್ಲಿಸುವರು.)

**ದೇವೇಂದ್ರ**—ನಾಟ್ಯವನ್ನೇತಕ್ಕೆ ನಿಲ್ಲಿಸಿದಿರಿ? ನಡೆಯಲಿ.

**ಬೃಹಸ್ಪತಿ**—ಮಹೇಂದ್ರಾ! ಪೂಜ್ಯರಾದ ನಾರದಮಹರ್ಷಿಗಳು ದಯಮಾಡಿಸಿರುವರು.

**ದೇವೇಂದ್ರ**—(ನೋಡಿ) ಆದರೇನು? ಗಾನನರ್ತನಗಳನ್ನೇತಕ್ಕೆ ನಿಲ್ಲಿಸಬೇಕು? (ನಾರದನನ್ನು ನೋಡಿ) ಪೂಜ್ಯರೇ, ದಯಮಾಡಿ. (ನರ್ತಕಿಯರ ಕಡೆ ನೋಡುವನು.)

**ನಾರದ**—(ಆತ್ಮಗತ) ಆಹಾ! ವಿಭವಮಗ್ನನಾದ ದೇವೇಂದ್ರನು ಎಷ್ಟು ಮತ್ತನಾಗಿರುವನು! ನಾನು ಬಂದಾಗಲೆಲ್ಲವೂ ಅರ್ಘ್ಯಪಾದ್ಯಾದಿಗಳಿಂದ ನನ್ನನ್ನು ಸತ್ಕರಿಸಿ ಉಪಚರಿಸುತ್ತಿದ್ದವನು, ಈಗ ಸರಿಯಾಗಿ ಕಣ್ಣೆತ್ತಿಯೂ ನೋಡದೆ, "ದಯಮಾಡಿ" ಎಂಬ ಶಬ್ದಮಾತ್ರದಿಂದ ಸತ್ಕರಿಸಿದನಲ್ಲಾ! ನಾನು ಹಿಂದಕ್ಕೆ ದಯಮಾಡಬೇಕೆಂದಾತನ ಅಭಿಪ್ರಾಯವೋ! (ಆಲೋಚಿಸಿ) ಇರಲಿ! ಆತನು ನನ್ನನ್ನು ಉದಾಸೀನ ಮಾಡಿದರೆ ನನಗದರಿಂದ ಕುಂದಕವೇನು!

**ಬೃಹಸ್ಪತಿ**—(ಪೀಠವನ್ನು ತೋರಿಸುವನು; ನಾರದನು ಬಂದು ಕುಳಿತುಕೊಳ್ಳುವನು.)

**ದೇವೇಂದ್ರ**—(ನರ್ತಕಿಯರನ್ನು ನೋಡಿ) ಏತಕ್ಕೆ ಸ್ತಬ್ಧರಾದಿರಿ? ಮುನಿಗಳ ಮುಖವನ್ನು ನೋಡಿ ಮುಗ್ಧೆಯರಾಗಿ ನಿಂದಿರುವಿರಲ್ಲಾ! ಚೆನ್ನಾಯಿತು! (ಆತ್ಮ) ನನ್ನ ಆನಂದ ಪ್ರವಾಹಕ್ಕೆ ಅಣೆಗಟ್ಟಿದಂತೆ ಬಂದನಲ್ಲಾ ಈ ಮುನಿಯು! (ಪ್ರಕಾಶಂ) ಎಲೌ! ರಂಭೋರ್ವಶಿಯರೇ! ನಡೆಯಲಿ! ಗಾನನರ್ತನಗಳು ನಡೆಯಲಿ, ಸಂಗೀತ ಪ್ರವಾಹವು ಉಕ್ಕಿ ಹರಿಯಲಿ! ನಿಲ್ಲಿಸಬೇಡಿ; ಇಂತಹ ಆನಂದಕರವಾದ ಸಮಯವನ್ನು ವ್ಯರ್ಥಮಾಡಲಾಗದು.

**ನರ್ತಕಿಯರು**—ಅಪ್ಪಣೆ. (ನಾಟ್ಯಮಾಡಿ ವಂದಿಸಿ ಹೋಗುವರು.)

**ನಾರದ**—ಮಹೇಂದ್ರಾ, ಇಂತಹ ಮಹಾ ವಿಭವವಿಲಾಸಗಳಿಂದೊಪ್ಪುವ ನಿನ್ನನ್ನು ನೋಡಿ ನನಗತ್ಯಾನಂದವಾಯಿತು.

**ಇಂದ್ರ**—ಬಹಳ ಸಂತೋಷ. ನಾನೂ ಸಹ. ೪

ಕಂ|| ಈ ನವಗಾಯನ ನರ್ತನ |
ದಾನಂದಾಬ್ಧಿಯೊಳೆ ಮುಳುಗಿ ಪರವಶನಾದೆಂ ||
ಈ ನನ್ನ ವೊಲತಿವಿಭವದೊ !
ಳಾನಂದಿಪನಾವನಿರ್ದಪಂ ಮೂಜಗದೊಳ್ ! || ೩ ||

ನೂರು ಅಶ್ವಮೇಧಯಾಗಗಳನ್ನು ಮಾಡಿ ಪಡೆಯಬೇಕಾದ ಈ ನನ್ನ ದೇವೇಂದ್ರ ಪದವಿಯು ಸಾಮಾನ್ಯವಾದುದೇ ! ಈ ವಿಭವಕ್ಕೆ ಸಮಾನ ವುಂಟೇ ! ಈ ಸುಖಕ್ಕೆ ಸಾಮ್ಯವುಂಟೇ ! ಆಹಾ ! ಈ ಮಹೇಂದ್ರನಲ್ಲವೇ ಗುಣದಲ್ಲಿಯೂ ವಿಭವದಲ್ಲಿಯೂ ವಿಕ್ರಮದಲ್ಲಿಯೂ ಸಮಾನರಹಿತನು !

**ನಾರದ**—ಮಹೇಂದ್ರಾ ! ಏನೆಂದು ಹೇಳಿದೆ ? ಗುಣದಲ್ಲಿಯೂ, ವಿಕ್ರಮ ದಲ್ಲಿಯೂ ನೀನು ಸಮಾನ ರಹಿತನೆ ?

**ಇಂದ್ರ**—ನಾರದರೇ, ಆ ವಿಷಯದಲ್ಲಿ ಸಂದೇಹವೇನು ? ಸ್ವರ್ಗ ಮರ್ತ್ಯ ಪಾತಾಳಲೋಕಗಳಲ್ಲಿ ಸ್ವರ್ಗಲೋಕವು ಹೇಗೆ ಶ್ರೇಷ್ಠವೋ ಅದರಂತೆ ಯೇ ಪುರುಷರಲ್ಲಿ ಸ್ವರ್ಗಾಧಿಪತಿಯಾದ ನಾನು ಶ್ರೇಷ್ಠನಲ್ಲವೋ ? ಅಂತಹ ಅಸಮಾನವಾದ ವಿಕ್ರಮವೂ ವಿಭವವೂ ಗುಣವೂ ನನ್ನಲ್ಲಿಲ್ಲ ದಿದ್ದರೆ ನನಗೆ ಈ ಇಂದ್ರಪದವಿಯು ಲಭಿಸುತ್ತಿತ್ತೋ ? ಬಲವೈರಿ ಯೆಂದೂ, ಸಾಂದ್ರವಿಭವನೆಂದೂ, ವಿಬುಧಸೇವಿತನೆಂದೂ, ತ್ರಿಲೋಕವೂ ನನ್ನನ್ನು ಹೊಗಳುತ್ತಿದ್ದಿತೋ ?

**ನಾರದ**—ಕೇಳು, ಪೂರ್ವಾರ್ಜಿತ ಪುಣ್ಯವಿಶೇಷದಿಂದ ಪದವಿಯೂ, ವೈಭ ವವೂ ಲಭಿಸುವುದು ಸಹಜ. ಪದವಿಗೆ ತಕ್ಕ ಪರಾಕ್ರಮವೂ ಗುಣವೂ ಎಲ್ಲರಲ್ಲಿಯೂ ಇರುವುವೆಂದು ಹೇಳಲಾಗುವುದಿಲ್ಲ. ಆ ಪದವಿಯನ್ನೂ ವೈಭವವನ್ನೂ ವಿವೇಕದಿಂದ, ನಿರಹಂಕಾರಿಯಾಗಿ ಉಪಯೋಗಿಸಿ ತನ್ನ ಬಲವನ್ನೂ ವಿದ್ಯೆಯನ್ನೂ, ಐಶ್ವರ್ಯವನ್ನೂ ಪರೋಪಕಾರಕ್ಕೂ ಲೋಕೋದ್ಧಾರಕ್ಕೂ, ದೀನರಕ್ಷಣೆಗೂ, ಉಪಯೋಗಿಸಿ, ಸಾರ್ಥಕ

ಪಡಿಸತಕ್ಕವನು ಮಾತ್ರವೇ ಗುಣವಂತನೆಂದು ಜನರಿಂದ ಹೊಗಳಲ್ಪಡಲು ಅರ್ಹನೂ, ದೈವ ಕಟಾಕ್ಷಕ್ಕೆ ಪಾತ್ರನೂ ಆಗುವನಲ್ಲದೆ ತನ್ನ ವಿದ್ಯಾವಿಭವಶಕ್ತಿಗಳನ್ನು ಸ್ವಾರ್ಥಪರತೆಯಿಂದ ದುರುಪಯೋಗಪಡಿಸಿ, ಮತ್ತನಾಗಿ, ಗರ್ವದಿಂದ ಸಮಾನರಹಿತನೆಂದು ಮೆರೆಯುತ್ತಿರುವವನು ಲೋಕದಲ್ಲಿ ಗುಣವಂತನೆಂದು ಉತ್ತಮ ಜನರಲ್ಲಿ ಎಂದಿಗೂ ಗಣ್ಯನಾಗಲಾರನು. ಆದುದರಿಂದ ನೀನು ಸಮಾನರಹಿತನೆಂಬ ಈ ಡಂಭದ ನುಡಿಯನ್ನೂ ಈ ದುರಹಂಕಾರವನ್ನೂ ಬಿಡು.

**ಇಂದ್ರ**—(ಕೋಪದಿಂದ) ಏನು? ಏನೆಂದು ಹೇಳಿದಿರಿ? ನಾನು ಸಮಾನರಹಿತನೆಂಬುದು ಡಂಭದ ನುಡಿಯೇ? ಪ್ರತ್ಯಕ್ಷವಾಗಿರುವ ವಿಷಯವನ್ನು ಹೇಳುತ್ತಿರುವ ನಾನು ದುರಹಂಕಾರಿಯೇ? ನೀವು ತಿರುಗಿರುವ ಮೂರು ಲೋಕಗಳಲ್ಲಿಯೂ ಈ ದೇವೇಂದ್ರನಂತಿರುವ ವಿಭವ ಗುಣ ಪರಾಕ್ರಮಗಳಿಂದ ಕೂಡಿದ ಒಬ್ಬ ಪುರುಷನನ್ನು ತೋರಿಸಬಲ್ಲಿರಾ?

**ನಾರದ**—ಇಲ್ಲ! ನಿನಗಿಂತಲೂ ಅತಿಶಯನೆನಿಸಿದವನನ್ನು ತೋರಿಸಬಲ್ಲೆನು.

**ಇಂದ್ರ**—ಏನು? ನನಗಿಂತಲೂ ಅತಿಶಯನೆನಿಸಿದವನನ್ನು ತೋರಿಸಬಲ್ಲಿರಾ? ಏತಕ್ಕೆ ಸುಮ್ಮನೆ ಮರುಳುಮಾತುಗಳನ್ನಾಡಿ ನನ್ನನ್ನು ಕೆರಳಿಸುವಿರಿ? ಅಂಥವನಿದ್ದರೆ ಅವನು ಯಾರು? ಅವನ ಹೆಸರನ್ನಾದರೂ ಹೇಳಿ; ಕೇಳುವ.

**ನಾರದ**—ಆತನ ಹೆಸರನ್ನು ಕೇಳುವುದರಿಂದೇನಾದೀತು? ಆತನನ್ನೇ ನಿನಗೆ ತೋರಿಸುವೆನು.

**ಇಂದ್ರ**—ಯಾವಾಗ ತೋರಿಸುವಿರಿ?

**ನಾರದ**—ಕ್ಷಿಪ್ರದಲ್ಲಿಯೇ ತೋರಿಸುವೆನು.

**ಬೃಹಸ್ಪತಿ**—(ಆತ್ಮ) ಈ ದೇವೇಂದ್ರನಿಗೆ ಏನು ಹುಚ್ಚು ಹಿಡಿಯಿತು! ಮಹಾನುಭಾವನಾದ ನಾರದನೊಡನೆ ವ್ಯರ್ಥವಾಗಿ ಚರ್ಚಿಸಿ ಆತನ ಮನಸ್ಸನ್ನು ಕಲಕುತ್ತಿರುವನಲ್ಲಾ! ಆತನು ಮನವಿಟ್ಟಲ್ಲಿ ಈ ಇಂದ್ರನು ಧೂಳಿಯಾಗಿ ಗಾಳಿಗೆ ಹಾರಿ ಹೋಗುವನು. (ಇಂದ್ರನನ್ನು ನೋಡಿ)

ಮಹೇಂದ್ರಾ! ಪೂಜ್ಯರಾದ ನಾರದರು ಸರ್ವಲೋಕ ಸಂಮಾನ್ಯರು, ನಿನಗೆ ಪೂಜ್ಯರು, ತ್ರಿಕಾಲ ಜ್ಞಾನಿಗಳು, ತ್ರಿಲೋಕ ಸಂಚಾರಿಗಳು. ಅವರಿಗಿರುವ ಸುಜ್ಞಾನ ವಿಭೂತಿಯಲ್ಲಿ ಅಣುಮಾತ್ರವೂ ನಮ್ಮಗಳಲ್ಲಿಲ್ಲ. ಅವರೊಡನೆ ನೀನು ಚರ್ಚಿಸತಕ್ಕುದಲ್ಲ, ಶಾಂತನಾಗು.

ಇಂದ್ರ—ಗುರುಗಳೇ! ಈ ನಾರದರು, ತ್ರಿಭುವನ ವಿಖ್ಯಾತ ವಿಭವವಿಕ್ರಮಗಳಿಂದ ರಂಜಿಸುವ ಈ ದೇವೇಂದ್ರನಿಗಿಂತಲೂ ಅತಿಶಯನಾದ ಪುರುಷನನ್ನು ತೋರಿಸುವೆನೆಂದು ಬೆದರಿಸುತ್ತಿರುವರು. ತಾವೂ ಇವರ ಮಾತನ್ನು ಅನುಮೋದಿಸುವಿರಾ? ನಿಜವನ್ನು ಹೇಳುತ್ತಿರುವ ನನ್ನದು ಡಂಭದ ನುಡಿಯಂತೆ! ಇಲ್ಲದ ಮಾತುಗಳನ್ನಾಡಿ ನನ್ನನ್ನು ಕೆರಳಿಸುತ್ತಿರುವ ಇವರದು ಸತ್ಯಗುಂಭದ ನುಡಿಯಂತೆ! (ಅವಹೇಳನದಿಂದ ನಗುವನು.)

ಬೃಹಸ್ಪತಿ—(ಆತ್ಮ) ಈ ಮೂರ್ಖನಿಗೆ ಪದವೀಮದವು ಮೇರೆ ಮೀರಿರುವುದು! ಏನು ಮಾಡಲಿ! (ನಾರದನನ್ನು ನೋಡಿ) ಪೂಜ್ಯರೇ! ಸರ್ವಜ್ಞರಾದ ತಮಗೆ ನಾನು ಹೆಚ್ಚಾಗಿ ಬಿನ್ನವಿಸಲಾರೆನು. ವಿವೇಚನೆಯಿಲ್ಲದೆ ನುಡಿದ ದೇವೇಂದ್ರನನ್ನು ತಾವು ಮನ್ನಿಸಬೇಕಾಗಿ ಬೇಡುವೆನು. (ಇಂದ್ರನನ್ನು ನೋಡಿ) ದೇವೇಂದ್ರಾ! ಸಂತೋಷ ಕಾಲದಲ್ಲಿ ಬಂದ ನಮ್ಮನಿಗಳನ್ನು ಸತ್ಕರಿಸದೆ ಹೀಗೆ ಶುಷ್ಕತರ್ಕದಿಂದ ವಿರಸವನ್ನು ತಂದುಕೊಳ್ಳುವುದು ಉಚಿತವಲ್ಲ. ಸಾಕು ಈ ಚರ್ಚೆಯು; ಇನ್ನು ಪೂಜ್ಯರನ್ನು ಪ್ರಾರ್ಥಿಸಿ ಕ್ಷಮೆಯನ್ನು ಬೇಡುವುದು ನಿನಗೆ ಶ್ರೇಯಸ್ಕರವು. ಅಲ್ಲದೆ ಶಾಪಾನುಗ್ರಹಶಕ್ತರಾದ ಇಂತಹ ಮಹನೀಯರಿಗೆ ಕೋಪವನ್ನು ಉಂಟುಮಾಡುವುದರಿಂದ ನಮಗೆ ತಾಪವೇ ಉಂಟಾಗುವುದು. ಆದುದರಿಂದ ಈ ವಿಚಾರವನ್ನಿಲ್ಲಿಗೆ ನಿಲ್ಲಿಸಿ, ಈಗ ಇಲ್ಲಿ ನಡೆದಿರುವ ಉಮಾಮಹೇಶ್ವರ ಪೂಜಾ ಸಮಯಕ್ಕೆ ಬಂದ ನಾರದರನ್ನು ಸತ್ಕರಿಸಿ ದೇವತಾಪ್ರಸಾದವನ್ನು ಅರ್ಪಿಸಿ ಸಂತೋಷಪಡಿಸಿ ಕಳುಹಿಸು. ಪ್ರಭುಗಳು ಯಾವಾಗಲೂ ಪರರಿಂದ ಶ್ರೇಯಸ್ಸನ್ನು ಬಯಸಿ ಅವರ ಮನಸ್ಸಿಗೆ ಹಿತವಾಗಿಯೇ ನಡೆದುಕೊಳ್ಳಬೇಕು.

**ಇಂದ್ರ**—ಗುರುಗಳೇ! ಪ್ರಕೃತದಲ್ಲಿ ತಾವು ಹೇಳುವುದು ನಿಜ. ಆಗಲಿ! ಅದರಂತೆಯೇ ಮಾಡುವೆನು. (ನಾರದನ ಬಳಿಗೆ ಬಂದು) ಪೂಜ್ಯರೇ! ನಮ ನಮಗೆ ಚರ್ಚೆಯೇತಕ್ಕೆ! ಬಿಡಿ. ಈ ದಿನ ಮಾಸಪದ್ಧತಿಯಂತೆ ನಮ್ಮ ಅರಮನೆಯಲ್ಲಿ ನಡೆದಿರುವ ಉಮಾಮಹೇಶ್ವರ ಪೂಜೆಗೆ ತಾವು ದಯ ಮಾಡಿಸಿದುದರಿಂದ ನನಗೆ ಬಹಳ ಸಂತೋಷವಾಯಿತು. ದೇವತಾ ಪ್ರಸಾದವನ್ನು ಸ್ವೀಕರಿಸಬೇಕು. (ಪುಷ್ಪಮಾಲಿಕೆಯನ್ನು ಹಾಕಿ ಪಾರಿಜಾತ ಪುಷ್ಪವನ್ನು ಕೈಗೆ ಕೊಡುವನು.)

**ನಾರದ**—ಬಹಳ ಸಂತೋಷ. (ಪ್ರಸಾದವನ್ನು ತೆಗೆದುಕೊಂಡು ಕಣ್ಣಿಗೊತ್ತಿ ಕೊಳ್ಳುವನು.)

**ದೇವೇಂದ್ರ**—ಎಲೈ! ಚಿತ್ರಸೇನ, ಚಿತ್ರಾಶ್ವ ಚಿತ್ರರಥಾದಿಗಳಿರಾ! ಇಲ್ಲಿ ನೆರೆದಿರುವ ಸಕಲ ದೇವಗಣ ಸಿದ್ಧಗಣ ಪ್ರಮಥಗಳನ್ನೂ ದೇವರ್ಷಿ ಬ್ರಹ್ಮರ್ಷಿ ಮಹರ್ಷಿಗಳೇ ಮೊದಲಾದ ಸಕಲ ಸಭ್ಯರನ್ನೂ ಫಲಪುಷ್ಪಾದಿ ದೇವತಾ ಪ್ರಸಾದವನ್ನಿತ್ತು ಸತ್ಕರಿಸಿರಿ.

**ಚಿತ್ರಸೇನ**—ಅಪ್ಪಣೆ. (ಎಲ್ಲರಿಗೂ ಪ್ರಸಾದವನ್ನು ವಿನಿಯೋಗಿಸುವರು.)

**ಎಲ್ಲರೂ**—೫ (ಪಾರ್ವತೀ ಪರಮೇಶ್ವರನ್ನು ಸ್ತುತಿಸುವರು)

---

## ದೃಶ್ಯ ೨—ದ್ವಾರಕಾನಗರ ಪ್ರಾಂತದಲ್ಲಿ ನಾರದನ ಪ್ರವೇಶ ೬

**ನಾರದ**—ಪದವೀಮದದಿಂದ ಪುರುಷನು ತನ್ನನ್ನು ತಾನೇ ಮರೆತುಬಿಡುವನು. ಅದರಲ್ಲಿಯೂ ವಿಷಯವಿಲಾಸವೆಂಬ ವಿಷವು ತಲೆಗೇರಿದರಂತೂ ಹೇಳಬೇಕಾದುದೇ ಇಲ್ಲ. ತನ್ನ ಪದವಿಯೇ ಪದವಿ; ತನ್ನ ಶಕ್ತಿಯೇ ಶಕ್ತಿ; ತನ್ನ ಸಿರಿಯೇ ಸಿರಿ; ತನ್ನ ಗುಣವೇ ಗುಣ; ತನ್ನ ಮಾತೇ ಮಾತು. ಇತರರು ಅಂಥವನೆದುರಲ್ಲಿ ನಿಂತಿದ್ದರೂ ಕಣ್ಣಿಗೆ ಕಾಣುವುದೇ ಇಲ್ಲ. ಕಂಡರೂ, ಹಿರಿಯರು, ಕಿರಿಯರು, ಎಂಬ ತಾರತಮ್ಯವೇ ಇಲ್ಲದೆ ಸಕಲರೂ ತನಗಿಂತಲೂ ಕೀಳಿಂತಲೇ ಭಾವಿಸುವನು! ಆಶ್ಚರ್ಯ! ಪರಮಾಶ್ಚರ್ಯ! ಇಂದ್ರನು ನನ್ನಲ್ಲಿ ಉದಾಸೀನತೆಯನ್ನು ತೋರಿದುದಿರಲಿ; ಅದರಿಂದ

ನನಗೆ ಕುಂದೇನು! ನರಕಾದಿ ರಾಕ್ಷಸರನ್ನು ವಧಿಸಿ ತನಗೆ ಅಪರಿಮಿತವಾದ ಉಪಕಾರ ಪರಂಪರೆಗಳನ್ನು ಮಾಡಿ, ಇಂದ್ರಪದವಿಯಲ್ಲಿ ನಿಲ್ಲಲು ತನಗೆ ಸಹಾಯಮಾಡಿರುವ ಆ ನಮ್ಮ ಜಗತ್ಪತಿಯಾದ ಶ್ರೀ ಕೃಷ್ಣಪರಮಾತ್ಮನೂ ಸಹ ಇವನ ಗಣನೆಗೆ ಬರಲಿಲ್ಲವೇ! ಆಹಾ! ಏನಾಶ್ಚರ್ಯ! ವಿಭವದಲ್ಲಿಯೂ, ವಿಕ್ರಮದಲ್ಲಿಯೂ, ಗುಣದಲ್ಲಿಯೂ ತಾನೇ ಸಮಾನರಹಿತನಂತೆ. ಪಾಪ! ಪಾಪ! ಅಹಂಕಾರಕ್ಕೆ ವಶರಾದವರಿಗೆ ತಮ್ಮ ನಿಜಸ್ಥಿತಿಯೆಲ್ಲಿ ತಿಳಿಯುವುದು! ಇರಲಿ! ಇಂಥವನಿಗೆ ಈಗ ನಾನು ಬುದ್ಧಿಗಲಿಸಲೇಬೇಕು! ಇದಕ್ಕೆ ಯಾವ ಸಂಧಾನವನ್ನು ಮಾಡಲಿ! (ಆಲೋಚಿಸಿ) (ಕೈಯಲ್ಲಿದ್ದ ಪಾರಿಜಾತ ಪುಷ್ಪವನ್ನು ನೋಡಿ) ಓಹೋ! ಸರಿ! ಇಂದ್ರನು ನನಗೆ ಶಿವ ಪ್ರಸಾದವಾಗಿ ಕೊಟ್ಟಿರುವ ಈ ಪಾರಿಜಾತ ಪುಷ್ಪವನ್ನೇ ನನ್ನ ಕಾರ್ಯ ಸಾಧನೆಗೆ ಬೀಜವನ್ನಾಗಿಟ್ಟುಕೊಂಡು, ಈ ಮೂಲಕ ಶ್ರೀ ಕೃಷ್ಣಪರಮಾತ್ಮನಿಗೂ, ಇಂದ್ರನಿಗೂ ಪ್ರಬಲ ಕಲಹವೊದಗಿ ಆ ಪುರಂದರನ ಅಹಂಕಾರವಡಗುವಂತೆ ಸಂಧಾನಮಾಡುವೆನು. ಈಗ ದ್ವಾರಕೆಗೇನೋ ಬಂದುದಾಯಿತು. ಇನ್ನು ಶ್ರೀ ಕೃಷ್ಣಪರಮಾತ್ಮನ ಬಳಿಗೆ ಹೋಗಿ ಸಮಯೋಚಿತವಾದ ಸಂಧಿಯನ್ನು ಕಲ್ಪಿಸಿಕೊಳ್ಳುವೆನು. (ಮುಂದೆ ನೋಡಿ) ಇದು ಯಾರು | ಓಹೋ! ರುಕ್ಮಿಣೀದೇವಿಯ ಸಖಿಯಾದ ಕಳಾನಿಧಿಯಲ್ಲವೇ!

**ಕಳಾನಿಧಿ**—(ಪ್ರವೇಶಿಸಿ) ಪೂಜ್ಯರಿಗೆ ವಂದಿಸುವೆನು. (ನಮಸ್ಕರಿಸುವಳು.)

**ನಾರದ**—ಎಲೌ! ಕಳಾನಿಧೀ ನಿನಗೆ ಮಂಗಳವಾಗಲಿ. ಇದೇನು? ಎಲ್ಲಿಗೆ ಹೋಗುತ್ತಿರುವೆ? ಈ ಆತುರವೇನು?

**ಕಳಾನಿಧಿ**—ಪೂಜ್ಯರೇ! ಈ ದಿನ ನಮ್ಮ ಅರಸಿಯಾದ ರುಕ್ಮಿಣೀ ದೇವಿಯು ಪುಣ್ಯಕವ್ರತವೆಂಬ ನೋಂಪಿಯನ್ನಾಚರಿಸುವಳು. ಅದಕ್ಕಾಗಿ ಸತ್ಯಭಾಮಾದೇವಿಯರಿನ್ನೂ ಬರಲಿಲ್ಲ. ಅವರನ್ನು ಕರೆತರಲು ರುಕ್ಮಿಣೀ ದೇವಿಯರ ಆಜ್ಞೆಯಂತೆ ಹೋಗಿದ್ದೆನು.

**ನಾರದ**—(ಆತ್ಮಗತಂ) ಓಹೋ! ನನ್ನ ಕಾರ್ಯಕ್ಕೆ ಸಂಧಿಯು ಚೆನ್ನಾಗಿದೆ. (ಪ್ರಕಾಶಂ) ಕಳಾನಿಧೀ ಹಾಗಾದರೆ ಸತ್ಯಭಾಮಾದೇವಿಯು ಬಂದಳಷ್ಟೆ?

**ಕಳಾನಿಧಿ**—ಇಲ್ಲ; ಬರಲಿಲ್ಲ; ತನಗೆ ಈ ದಿನ ದೇಹಾಯಾಸವೆಂತಲೂ ತನ್ನ ಪ್ರತಿನಿಧಿಯಾಗಿ ತನ್ನ ಆಪ್ತಸಖಿಯಾದ ಕಾಮಲೇಖೆಯನ್ನು ಕಳುಹಿಸಿ ಕೊಡುವುದಾಗಿಯೂ ಆಕೆ ನನ್ನೊಡನೆ ಹೇಳಿದಳು.

**ನಾರದ**—(ಆತ್ಮ) ಇಂತಹ ಸಂಧಿಯು ತಾನೇ ನನ್ನ ಕಾರ್ಯಕ್ಕನುಕೂಲ; (ಪ್ರಕಾಶಂ) ಸರಿ! ಸರಿ! ಹಾಗಾದರೆ ವ್ರತವು ರುಕ್ಮಿಣೀದೇವಿಯ ಅರ ಮನೆಯಲ್ಲಿ ತಾನೇ ನಡೆಯುವುದು?

**ಕಳಾನಿಧಿ**—ಇಲ್ಲ! ನಮ್ಮ ನಗರದ ಮುಂದಿನ ಗಂಧರ್ವೋದ್ಯಾನದಲ್ಲಿ ನಡೆಯಲೇರ್ಪಡಿಸಿ ಈಗ ಮೂರು ತಿಂಗಳಿಂದಲೂ ಶ್ರೀಕೃಷ್ಣಪರಮಾ ತ್ಮನು ಆ ವನವನ್ನು ವಿಚಿತ್ರತರವಾಗಿ ಅಲಂಕಾರ ಮಾಡಿಸುತ್ತಿರುವನು.

**ನಾರದ**—ಆಹಾ! ಮಹಾರಸಿಕಶಿಖಾಮಣಿಯಲ್ಲವೇ ಶ್ರೀ ಕೃಷ್ಣಮೂ ರ್ತಿಯು! ಆತನು ಈಗ ಎಲ್ಲಿರುವನು?

**ಕಳಾನಿಧಿ**—ಎಲ್ಲರೂ ಗಂಧರ್ವೋದ್ಯಾನಕ್ಕೆ ಹೊರಡುವ ಸಂಭ್ರಮದಲ್ಲಿರು ವರು. ಪೂಜ್ಯರಾದ ತಾವೂ ಸಹ ಅಲ್ಲಿಗೆ ದಯಮಾಡಿಸಿ ಅವರನ್ನು ಆಶೀರ್ವದಿಸುವುದುಚಿತವಲ್ಲವೇ? ತಮ್ಮಾಗಮನದಿಂದ ಪರಮಾತ್ಮನೂ, ರುಕ್ಮಿಣೀದೇವಿಯೂ ಪರಮಾನಂದಪಡುವರು.

**ನಾರದ**—ಕಳಾನಿಧೀ! ಬಹಳ ಸಂತೋಷ. ನಾನು ಶ್ರೀ ಕೃಷ್ಣಪರ ಮಾತ್ಮನ ಸಂದರ್ಶನಕ್ಕಾಗಿಯೇ ಬಂದೆನು. ಆತನು ಪತ್ನೀಪರಿವಾರ ಸಹಿತನಾಗಿ ಇಂತಹ ಮಹೋತ್ಸವದಲ್ಲಿರುವುದನ್ನು ಕೇಳಿ ಬಹಳ ಸಂತೋಷವಾಯಿತು. ಈ ಸಂತೋಷ ಸಮಯದಲ್ಲಿ ಆತನ ಸಂದರ್ಶ ನವು ನನಗೆ ಮಹದಾನಂದಕರವು. ಬಾ, ಹೋಗೋಣ.

**ಕಳಾನಿಧಿ**—ಅಪ್ಪಣೆ, ಹೀಗೆಯೇ ದಯಮಾಡಿಸಬೇಕು. (ಹೋಗುವರು.)

## ದೃಶ್ಯ ೩—ಅರಮನೆಯ ಮುಂದೆ ಗಂಧರ್ವೋದ್ಯಾನಕ್ಕೆ ಹೋಗುವ ಮಾರ್ಗ.

(ಮಂಗಳ ವಾದ್ಯಗಳಲ್ಲಿ ಶ್ರೀ ಕೃಷ್ಣರುಕ್ಮಿಣಿಯರು, ಪೂಜಾಸಾಮಗ್ರಿಗಳನ್ನು ತರುವ ಪರಿವಾರದೊಡನೆ ಪ್ರವೇಶಿಸುವನು.)

**ಶ್ರೀ ಕೃಷ್ಣ**—ಪ್ರಿಯೇ! ರುಕ್ಮಿಣೀ! ನಮ್ಮ ಉಭಯಕುಲಗಳಿಗೂ ಮಂಗಳ ದಾಯಕಿಯಾದ ಸರ್ವಮಂಗಳೆಯನ್ನು ವೈಭವದಿಂದಾರಾಧಿಸುವ ಈ ಉತ್ಸವ ಸಮಾರಂಭವು ನನ್ನ ಮನಸ್ಸಿಗೆ ಅತ್ಯಾನಂದವನ್ನುಂಟುಮಾಡಿ ರುವುದು.

**ರುಕ್ಮಿಣಿ**—ಪ್ರಿಯಾ! ನಿಶ್ಚಯ! ನನಗಾದರೋ, ತಾವು ಈ ಮಹೋತ್ಸವ ಕಾಲದಲ್ಲಿ ತಪ್ಪದೆ ಬಂದು ನನ್ನೊಡನೆ ಸಂತೋಷಭಾಗಿಯಾಗಿರುವುದು ಮತ್ತಷ್ಟು ಆನಂದವನ್ನುಂಟುಮಾಡಿರುವುದು.

**ಕೃಷ್ಣ**—ರುಕ್ಮಿಣೀ! ಏನಿದು ಹೀಗೆ ಹೇಳುವೆ? ನೀನು ಮಾಡುವ ಪುಣ್ಯ ಕಾರ್ಯಗಳಲ್ಲಿಯೂ, ನಿನ್ನ ಸಂತೋಷದಲ್ಲಿಯೂ ನಾನು ಭಾಗಿಯಾಗ ತಕ್ಕವನಲ್ಲವೆಂದು ತಿಳಿದೆಯಾ?

**ರುಕ್ಮಿಣಿ**—ಪ್ರಿಯಾ! ತಾವೇನೋ ನನ್ನ ಸಂತೋಷದಲ್ಲಿ ಭಾಗಿಯಾಗತಕ್ಕ ವರೇ ಸರಿ! ಆದರೆ, ಶರೀರವೊಂದು ಕಡೆ, ಚಿತ್ತವೊಂದು ಕಡೆ ಇರುವವ ರಿಗೆ ಯಾವ ಕಾರ್ಯ ಮಾಡುವುದಕ್ಕೂ ಸಾಧ್ಯವಿಲ್ಲವಷ್ಟೆ! ಅದರ ಲ್ಲಿಯೂ ಪರಾಧೀನರಾದ ತಮ್ಮಂತಹ ಮಹಾಪುರುಷರಿಗೆ ಅದು ಇನ್ನೂ ಕಷ್ಟವಲ್ಲವೇ?

**ಕೃಷ್ಣ**—ರುಕ್ಮಿಣೀ! ಬಹು ಭಾವಗರ್ಭಿತವಾಗಿ ಮಾತನಾಡುತ್ತಿರುವೆ ಯಲ್ಲಾ! ನಿತ್ಯಸ್ವತಂತ್ರನಾದ ನಾನು ಪರಾಧೀನನು ಹೇಗಾದೆನು?

**ರುಕ್ಮಿಣಿ**—ಅದು ಈಗ ತಿಳಿಯಲಾರದು; ಸತ್ಯಭಾಮೆಯು ಸನ್ನೆಮಾಡಿ ದಾಗ, ಜಾಂಬವತಿಯು ಜಾಲಕ್ಕೆ ಬಿದ್ದಾಗ, ಸರಸವಾಣಿಯು ಸರಸಕ್ಕೆ ಕರೆದಾಗ, ಪದ್ಮಾಕ್ಷಿಯಲ್ಲಿ ಪಗಡೆಯಾಡುವಾಗ, ನಾರದರ ನಾದವು

ಕೇಳಿಬಂದಾಗ; ತಾವು ಎಷ್ಟು ಸ್ವತಂತ್ರರಾಗಿರುವಿರೆಂಬುದನ್ನು ನಾನು ಆಗಾಗ ನೋಡಿಯೂ ಕೇಳಿಯೂ ಸಹ ಇರುವೆನು.

**ಕೃಷ್ಣ**—(ನಕ್ಕು) ಓ ಪ್ರಿಯೇ! ನನ್ನಲ್ಲಿ ಪ್ರೀತಿಯಿಟ್ಟು ಕರೆದವರಿಗೆ ಸಂತೋಷವನ್ನುಂಟುಮಾಡುವುದು ನನ್ನ ಕರ್ತವ್ಯವು. ಅದರಂತೆಯೇ ನೀನೂ ಸಹಜವಾದ ಪ್ರೀತಿಯಿಂದ ನನ್ನನ್ನು ಅಪೇಕ್ಷಿಸಿದುದರಿಂದ ನಾನು ನಿನ್ನ ಇಷ್ಟಾನುವರ್ತಿಯಾಗಿ ನಡೆದಿರುವೆನು.

**ರುಕ್ಮಿಣಿ**—ನಿಜ! ಅದರಿಂದಲೇ! ಈ ದಿನವು ನಮಗೆ ಸಕಲ ವಿಷಯಗಳಲ್ಲಿಯೂ ಆನಂದಕರವಾದುದು. ಇನ್ನು ಉದ್ಯಾನಕ್ಕೆ ಹೋಗಿದಾಕ್ಷಾಯಿಣಿಯನ್ನಾರಾಧಿಸುವ.

**ಶ್ರೀಕೃಷ್ಣ**—ಆಗಲಿ ನಡೆ ಹೋಗುವ. (ಹೋಗುತ್ತಿರುವರು.)

**ಮಕರಂದ**—(ಓಡಿಬಂದು) ಮಹಾಸ್ವಾಮಿಯವರಿಗೆ ನಮಸ್ಕರಿಸುವೆನು.

**ಕೃಷ್ಣ**—ಇದೇನಯ್ಯಾ! ಮಕರಂದಾ! ಎಂದೂ ಇಲ್ಲದ ಈ ವಿಚಿತ್ರವಾದ ಮರ್ಯಾದೆಯು ನನಗೆ? "ಮಹಾಸ್ವಾಮಿ" ಎಂದು ಸಂಬೋಧಿಸುವೆ?

**ಮಕರಂದ**—ಓಹೋ! ಹಾಗಾದರೆ ನಾನು ಯಾರೆಂಬುದು ಜ್ಞಾಪಕವಿದೆಯಷ್ಟೆ! ಈ ಮಹೋತ್ಸವ ಸಂಭ್ರಮದಲ್ಲಿ ನೀನು ನನ್ನನ್ನು ಗುರುತಾದರೂ ಹಿಡಿಯುವೆಯೋ ಇಲ್ಲವೋ ಎಂಬ ಸಂದೇಹದಿಂದ ಹಾಗೆ ಹೇಳಿದೆನು.

**ಕೃಷ್ಣ**—ಒಳ್ಳೆಯ ವಿಚಿತ್ರವಾಗಿ ಮಾತನಾಡುವೆಯಲ್ಲಾ! ಉತ್ಸವವಾದ ಮಾತ್ರಕ್ಕೇ ನಾನು ನಿನ್ನನ್ನು ಮರೆತುಬಿಡುವೆನೇ?

**ಮಕರಂದ**—ಇನ್ನು ಹೊಸದಾಗಿ ಮರೆಯಬೇಕೇ! ಹಾಲಿನಲ್ಲಿ ರುಚಿಯೂ, ದೀಪದಲ್ಲಿ ಬೆಳಕೂ, ಹೋಳಿಗೆಯಲ್ಲಿ ಸಿಹಿಯೂ, ಸೇರಿಕೊಂಡು ಒಂದನ್ನೊಂದು ಅಗಲದಿರುವಂತೆ ನಾವಿಬ್ಬರೂ ಸದಾ ಜೊತೆಯಲ್ಲಿಯೇ ಇರುತ್ತಿದ್ದೆವು; ಈಗ ಒಳ್ಳೆಯ ಸಮಯದಲ್ಲಿಯೇ ನೀನು ನನ್ನನ್ನು ಕೈಬಿಟ್ಟೆ. ಇದರಿಂದ ನಿನಗೆ ನನ್ನ ಜ್ಞಾಪಕವೇ ಇರಲಾರದೆಂದು ಊಹಿಸಬೇಕಾಯಿತು.

**ಕೃಷ್ಣ**—ಮಕರಂದಾ ! ನಾನು ನಿನ್ನನ್ನು ಮರೆಯಲಿಲ್ಲ. ನೀನೇ ಸಮಯಕ್ಕೆ ಸರಿಯಾಗಿ ಬರಲಿಲ್ಲ. ಅದು ನನ್ನ ತಪ್ಪೇ?

**ಮಕರಂದ**—ಇಲ್ಲ ! ಇಲ್ಲ ! ನನ್ನದೇ ತಪ್ಪು ! ದೊಡ್ಡವರು ಯಾವಾಗಲೂ ತಪ್ಪನ್ನು ಮಾಡುವುದೇ ಇಲ್ಲ ! ಅವರು ಆಶ್ರಿತರನ್ನು ಮರೆಯುವುದೇ ಇಲ್ಲ ! ಮರೆತಾಗ ಆಶ್ರಿತರದೇ ಅಪರಾಧ. ನಾನು ಈ ಮಹೋತ್ಸವ ದಲ್ಲಿ ನಿನ್ನ ಜೊತೆಯಲ್ಲಿಯೇ ಇದ್ದು ನಿನ್ನ ವೈಭವವನ್ನು ನೋಡಿ ಆನಂದ ಪಡಬೇಕೆಂದು ಅತಿ ಕುತೂಹಲದಿಂದಿದ್ದೆನು. ನೀನೇ ಕೈಬಿಟ್ಟಮೇಲೆ ಇನ್ನು ಅದೆಲ್ಲಿ ನೆರವೇರುವುದು ! ಇನ್ನು ನಾನು ಮನೆಗೆ ಹೋಗುವೆನು. (ಹಿಂದಿರುಗುತ್ತಿರುವನು.)

**ಕೃಷ್ಣ**—(ಹಿಡಿದು ನಿಲ್ಲಿಸಿ) ಮಕರಂದಾ ! ನಿರಾಶನಾಗಬೇಡ. ಈ ಉತ್ಸವ ಕಾಲದಲ್ಲಿ ನಿನ್ನಂತಹ ವಿನೋದಪ್ರಿಯನಾದ ಸ್ನೇಹಿತನು ನನ್ನ ಬಳಿ ಯಲ್ಲಿಯೇ ಇರಬೇಕೆಂಬುದೇ ನನ್ನ ಅಭಿಲಾಷೆ. ಬಾ; ನನಗಾಗಿ ಪುರೋಹಿತರು ಕಾದಿರುವರು. ನಾನು ಹೊರಡಲು ವೇಳೆಯಾಯಿತು. ಬರುವೆಯೋ?

**ಮಕರಂದ**—ಬಂದೇ ಇರುವೆನು. ಮತ್ತೆ ಕೇಳುವುದೇನು ? ಮುಂದೆ ಮುಕುಂದ, ಹಿಂದೆ ಮಕರಂದ; ನಡೆ. (ಹೋಗುವರು.)

## ದೃಶ್ಯ ೪—ಗಂಧರ್ವೋದ್ಯಾನ

(ರುಕ್ಮಿಣಿಯು ದಾಕ್ಷಾಯಿಣಿಯನ್ನು ಪೂಜಿಸುವಳು. ಎಲ್ಲರೂ ಗೌರಿಯನ್ನು ಸ್ತುತಿಸುವರು.)

**ನಾರದ**—(ಪ್ರವೇಶಿಸುವನು.)

ಕಂ|| ಶ್ರೀ ಕಮಲಾ ಪ್ರಿಯರಮಣಾ |
ನಾಕಾಧಿಪವಿಜಯಕಾರಣಾನತ ಶರಣಾ ||
ಲೋಕಾವನಚಣ ಜಯ ಲೀ |
ಲಾಕರ ಭವತರಣ ಪರಮಪಾವನ ಚರಣಾ || ೪ ||

**ಕೃಷ್ಣ ರುಕ್ಮಿಣಿಯರು**—ಪೂಜ್ಯರಿಗೆ ವಂದಿಸುವೆವು. (ನಮಸ್ಕರಿಸುವರು.)

**ನಾರದ**—ಜಗತ್ಪಾಲಕ ದಂಪತಿಗಳಿರಾ, ನಿಮಗೆ ಮಂಗಳವಾಗಲಿ.

**ಕೃಷ್ಣ**—ಪೂಜ್ಯರೇ, ಈ ಮಹೋತ್ಸವಕಾಲದಲ್ಲಿ ಮಹನೀಯರಾದ ತಮ್ಮ ಆಗಮನದಿಂದ ನಮಗತ್ಯಾನಂದವಾಯಿತು. ಈ ಪೀಠದಲ್ಲಿ ಸುಖಾಸೀನರಾಗಬೇಕು.

**ನಾರದ**—ಮುಕುಂದಾ ! ದೇವಲೋಕದಲ್ಲಿ ಇಂದ್ರನಿಂದ ನಡೆಯಿಸಲ್ಪಟ್ಟ ಪಶುಪತಿ ಪೂಜೆಯನ್ನು ನೋಡಿ ಆನಂದಪಟ್ಟು ಬರುತ್ತಿರಲು, ನೀವುಗಳು ಸರ್ವಮಂಗಳೆಯನ್ನು ಅರ್ಚಿಸಿ ಪುಣ್ಯ ವ್ರತ ಸಂಭ್ರಮದಲ್ಲಿ ಇರುವುದನ್ನು ಕೇಳಿ ಬಹಳ ಸಂತೋಷವಾಯಿತು. ಆದುದರಿಂದ ನಿಮ್ಮನ್ನು ನೋಡಿ ಆನಂದಿಸಲು ಇಲ್ಲಿಗೆ ಬಂದೆನು. (ಕುಳಿತುಕೊಳ್ಳುವನು.)

**ಕೃಷ್ಣ**—ಬಹಳ ಸಂತೋಷ. ಲೋಕಾಂತರಗಳಲ್ಲಿ ಸಂಚರಿಸುವ ತಮ್ಮಿಂದ ವಿಶೇಷವಾರ್ತೆಯನ್ನು ತಿಳಿಯಲು ಕುತೂಹಲಭರಿತನಾಗಿರುವೆನು.

**ನಾರದ**—(ಆತ್ಮ) ಸರಿ ! ನನ್ನ ಇಷ್ಟಕ್ಕೆ ತಕ್ಕ ಪ್ರಶ್ನೆಯೇ ಹುಟ್ಟಿತು ! ಇನ್ನು ಈ ಪುಷ್ಪದ ಮೂಲಕ ಇಲ್ಲಿ ಸಪತಿಯರಲ್ಲಿ ಕಲಹವನ್ನು ಹುಟ್ಟಿಸಿ, ಈತನು ಇಂದ್ರನ ಮೇಲೆ ಕೆರಳುವಂತೆ ಮಾಡಿ ಅವನಿಗೆ ಈತನಿಂದ ಅಹಂಕಾರ ಖಂಡನೆ ಮಾಡಿಸುವೆನು. (ಪ್ರಕಾಶಂ) ಕೃಷ್ಣ ಪರಮಾತ್ಮಾ ! ವಿಶೇಷವನ್ನು ಏನೆಂದು ಹೇಳಲಿ ! ಆ ದೇವೇಂದ್ರನು ನಡೆಯಿಸಿದ ಉಮಾಮಹೇಶ್ವರ ಪೂಜೆಯ ವೈಭವವನ್ನು ನಾನು ಇಷ್ಟಿಷ್ಟೆಂದು ಹೇಳಲಾರೆನು. ಇದೋ !

**ಕಂ||** ಹರಿಲೋಕದೆ ಹರಪೂಜಾ |
ಪರಿತೋಷಂ ಲಭಿಸೆ ಪಾರಿಜಾತದ ಸುಮವಂ ||
ಹರಿ ನಿನಗರ್ಪಿಡೆನುತಾ |
ದರದಿಂ ಕುಡಲೆಳಸಿ ತಂದೆನಿಂದಿರೆಯರಸಾ || ೫ ||

(ಪಾರಿಜಾತ ಪುಷ್ಪವನ್ನು ಕೊಟ್ಟು) ಇಷ್ಟಾರ್ಥಗಳನ್ನು ಕೊಡುವ ಅಪೂರ್ವ

ಪರಿಮಳಪರಿಶೋಭಿತವಾದ ಈ ಪಾರಿಜಾತ ಪುಷ್ಪವನ್ನು ಸ್ವೀಕರಿಸು. ಈ ಪುಷ್ಪದ ಲಾಭವೇ ವಿಶೇಷ ವಿಷಯವು.

**ಕೃಷ್ಣ**—(ತೆಗೆದು ಕಣ್ಣಿಗೊತ್ತಿಕೊಂಡು) ಪೂಜ್ಯರೇ! ತಮ್ಮನುಗ್ರಹದಿಂದ ಧನ್ಯನಾದೆನು. ಆಹಾ! ಎಂತಹ ಅಮೋಘವಾದ ಪುಷ್ಪ! ಇದರ ಮನೋಹರಾಕಾರವೂ, ದಿಕ್ತಟಗಳನ್ನು ತುಂಬುವ ಪರಿಮಳವೂ ಅತ್ಯಾಶ್ಚರ್ಯಕರಗಳಾಗಿವೆ.

**ನಾರದ**—ಇಷ್ಟು ಮಾತ್ರವೇ ಅಲ್ಲ; ಇದರ ಆಕಾರ ಸೌರಭ್ಯಗಳಿಗಿಂತಲೂ ಇದರ ಮಹಿಮೆಯು ಅತಿಶಯವಾದುದು.

**ಮಕರಂದ**—ನಾರದರು ತಂದರೆ ಸಾಮಾನ್ಯವಾದುದನ್ನು ತರುವುದೇ ಇಲ್ಲ. ಯಾರೂ ಕಾಣದುದನ್ನು, ಎಲ್ಲಿಯೂ ಇಲ್ಲದುದನ್ನೇ ತರುವರು!

**ಕೃಷ್ಣ**—(ನಕ್ಕು) ಸುಮ್ಮನಿರು ಮಕರಂದಾ! ಪೂಜ್ಯರ ವಿಷಯದಲ್ಲಿಯೂ ನಿನ್ನ ವಕ್ರೋಕ್ತಿಗಳೇ!

**ಮಕರಂದ**—ಇರುವುದನ್ನು ಹೇಳಿದರೆ ವಕ್ರವೇ?

**ಕೃಷ್ಣ**—ಆಗಲಿ, ಸ್ವಲ್ಪ ಸುಮ್ಮನಿರು; (ರುಕ್ಮಿಣಿಯನ್ನು ನೋಡಿ) ಪ್ರಿಯೇ! ಈ ಉತ್ಸವಕಾಲದಲ್ಲಿ ಎಂತಹ ಅಪೂರ್ವವಸ್ತುವು ದೊರಕಿತು ನೋಡಿದೆಯಾ!

**ರುಕ್ಮಿಣಿ**—ಪ್ರಿಯಾ! ಇದೆಲ್ಲವೂ ನಿನ್ನ ಸಂತೋಷ ಮತ್ತು ಮಹರ್ಷಿಗಳ ಅನುಗ್ರಹ ವಿಶೇಷ.

**ಮಕರಂದ**– (ಆತ್ಮ) ಮುನಿಯು ಹೂಡಿಬಿಟ್ಟ; ಏನೋ ಆಟವನ್ನು!

**ಕೃಷ್ಣ**—(ನಾರದನನ್ನು ನೋಡಿ) ಪೂಜ್ಯರೇ, ಈ ಪುಷ್ಪದ ಮಹಿಮೆಯು ಅತಿಶಯವಾದುದೆಂದು ಹೇಳಿದಿರಲ್ಲವೇ! ಅದನ್ನು ವಿವರವಾಗಿ ಅಪ್ಪಣೆ ಕೊಡಿಸಬೇಕು.

**ನಾರದ**—ಗೋವಿಂದಾ! ಇದು ಎಂದೆಂದಿಗೂ ಕಳೆಗುಂದಿ ಬಾಡುವ ಪುಷ್ಪವಲ್ಲ. ಅಲ್ಲದೆ, ೧೦

ಕಂದ|| ಬಯಸಿದುದಂ ನೀಡವುದತಿ |
ಶಯಮಹಿಮಂ ಕಾಮಧೇನು ಚಿಂತಾಮಣಿವೋಲ್ ||
ಜಯಕರಮನುಪಮ ಭಾಗ್ಯೋ |
ದಯಕಾರಣಮಹುದು ಧರಿಸಿದರ್ಗೀ ಕುಸುಮಂ || ೬ ||

ಇದನ್ನು ಧರಿಸಿ ಏನನ್ನು ಅಪೇಕ್ಷಿಸಿದರೂ ಆ ಕ್ಷಣವೇ ಸಿದ್ಧಿಸುವುದು. ದೇವಲೋಕದ ವೈಭವವು ಇದರಿಂದ ಸದಾ ಕರಗತವಾಗಿರುವುದು. ಇದನ್ನು ಯಾವ ಮಾನವ ಸ್ತ್ರೀಯರೂ ಈವರೆಗೂ ಕಂಡು ಅರಿಯರು. ಇಂತಹ ಅಮೋಘವಾದ ಪುಷ್ಪವನ್ನು ಧರಿಸಲು ಆದಿಲಕ್ಷ್ಮೀಸ್ವರೂಪಳಾದ ರುಕ್ಮಿಣೀದೇವಿಯು ಮಾತ್ರ ಅರ್ಹಳೆಂದು ತಿಳಿದು ಇದನ್ನು ಇಲ್ಲಿಗೆ ತಂದೆನು; ಇದೋ, ವ್ರತಪರಿಪೂತಳಾದ ಆಕೆಗೆ ಧರಿಸಲು ಇದನ್ನು ಕೊಡು.

**ಕೃಷ್ಣ**—ಬಹಳ ಸಂತೋಷ ತಮ್ಮ ಪ್ರೀತಿಗಾಗಿ ನಾವು ಕೃತಜ್ಞರಾಗಿರುವೆವು. (ರುಕ್ಮಿಣಿಯನ್ನು ನೋಡಿ) ಪ್ರಿಯೇ! ಮುನಿಗಳ ಆಜ್ಞೆಯಂತೆ ಈ ದಿವ್ಯ ಪುಷ್ಪವನ್ನು ಧರಿಸು. (ಪುಷ್ಪವನ್ನು ತಾನೇ ರುಕ್ಮಿಣಿಗೆ ಮುಡಿಸುವನು.)

(ಸತ್ಯಭಾಮೆಯ ಸಖಿಯಾದ ಕಾಮಲೇಖೆಯು ಅಸೂಯೆಯಿಂದ ನೋಡಿ ಸಿಡುಗುಟ್ಟುವಳು.)

**ಮಕರಂದ**—(ಆತ್ಮಗತ) ಈಗ ನಮ್ಮ ಸತ್ಯಭಾಮಾ ದೇವಿಯರು ಇರಬೇಕಾಗಿತ್ತು! ಕೃಷ್ಣನ ಗತಿ ಏನಾಗುತ್ತಿತ್ತೋ! ನಾರದರು ಏನಾಗುತ್ತಿದ್ದರೋ!

**ಕೃಷ್ಣ**—(ರುಕ್ಮಿಣಿಯನ್ನು ನೋಡಿ) ಆಹಾ! ಆಶ್ಚರ್ಯ! ಪರಮಾಶ್ಚರ್ಯ!! ಈ ಪುಷ್ಪವನ್ನು ಧರಿಸಿದ ಮೇಲೆ ರುಕ್ಮಿಣಿಯ ಲಾವಣ್ಯವು ಇಮ್ಮಡಿಸಿ ನನಗೆ ಪರಮಾನುರಾಗವನ್ನು ಉಕ್ಕಿಸುತ್ತಿರುವುದು! ಆಹಾ! ಇವಳ ತೇಜಸ್ಸು ಬೆಳದಿಂಗಳಿನಂತೆ ಸುತ್ತಲೂ ವಿಸ್ತರಿಸಿರುವುದಲ್ಲಾ? ಇದೆಂತಹ ಮಹಿಮಾಕರವಾದ ಪುಷ್ಪ!!

**ನಾರದ**—ಏನಿದು! ಇಷ್ಟು ಮಂದಿ ನೆರೆದಿರುವ ಈ ಮಹೋತ್ಸವದಲ್ಲಿ

ಸತ್ಯಭಾಮಾದೇವಿಯು ಕಾಣುವುದೇ ಇಲ್ಲವಲ್ಲಾ! ಕಾರಣವೇನು? ರುಕ್ಮಿಣೀದೇವೀ, ನೀನು ಆಕೆಗೆ ಬರುವಂತೆ ಹೇಳಿ ಕಳುಹಿಸಲಿಲ್ಲವೇ?

**ಕಾಮಲೇಖೆ**—(ಆತ್ಮ) ಈ ಅವಮಾನವನ್ನನುಭವಿಸಲು ಸತ್ಯಭಾಮೆಯು ಇಲ್ಲಿಗೆ ಬರಬೇಕಾಗಿತ್ತೇನೋ!

**ರುಕ್ಮಿಣಿ**—ಪೂಜ್ಯರೇ! ಹೇಳಿ ಕಳುಹಿಸಿದ್ದೆನು. ಮತ್ತು ನಾನೂ ಸಹ ಹೋಗಿ ಕರೆದೆನು. ಆಕೆಯು ತನ್ನ ಪ್ರತಿನಿಧಿಯಾಗಿ ತನ್ನ ಸಖಿಯಾದ ಈ ಕಾಮಲೇಖೆಯನ್ನು ಕಳುಹಿಸಿರುವಳು.

**ನಾರದ**—ಸರಿ! ಸರಿ! ಪಟ್ಟದರಸಿಯಾದ ನೀನೇ ಹೋಗಿ ಕರೆದರೆ, ತನ್ನ ಸಖಿಯನ್ನು ಕಳುಹಿಸಿದಳೇ? ನೋಡಿದೆಯಾ! ನೀನು ಮಾಡುವ ವ್ರತಕ್ಕೆ ಸತ್ಯಭಾಮೆಯು ಬಂದಾಳೇ!

**ಮಕರಂದ**—(ಆತ್ಮ) ಮುನಿಯು ತಗುಲಿಸಿದ ಬೆಂಕಿಯನ್ನು.

**ಕಾಮಲೇಖೆ**—ಅಯ್ಯೋ! ನಮ್ಮ ಒಡತಿಯನ್ನು ದೂರಲಾರಂಭಿಸಿದನಲ್ಲಾ ಈ ಮುನಿಯು! ಇದನ್ನು ನೋಡಿ ಶ್ರೀಕೃಷ್ಣನೂ ಸುಮ್ಮನಿರುವನೇ! ಆತನಿಗೂ ಇದು ಸಮ್ಮತವೇ ಇರಬಹುದು. ಆಗಲಿ.

**ರುಕ್ಮಿಣಿ**—ಪೂಜ್ಯರೇ! ಆಕೆಯು ಸಕಾರಣವಾಗಿಯೇ ನಿಂತಿರಬೇಕು. ಆಕೆಯಲ್ಲಿ ನಾವು ದೋಷವನ್ನೇತಕ್ಕೆ ಎಣಿಸಬೇಕು?

**ನಾರದ**—ಎಣಿಸಲಿ; ಎಣಿಸದಿರಲಿ; ದೋಷವು ಎಂದಿದ್ದರೂ ದೋಷವೇ. ಸವತಿಯ ಮಾತ್ಸರ್ಯದಿಂದ ನಿನಗೆ ಅವಮಾನಮಾಡಲು ತನ್ನ ಸೇವೆ ಮಾಡುವ ದೂತಿಯನ್ನು ಕಳುಹಿಸುವುದೆಂದರೇನು? ಆಹಾಹಾ! ಏನು ಅನ್ಯಾಯ! ಏನನ್ಯಾಯ!!

**ಮಕರಂ**—(ಆತ್ಮ) ಪುಣ್ಯಾತ್ಮ! ನೀರಲ್ಲಿ ಬೆಂಕಿಯನ್ನು ಹುಟ್ಟಿಸುತ್ತಿರುವನು.

**ಕೃಷ್ಣ**—(ಆತ್ಮ) ಈ ಮುನಿಯು ಸುಮ್ಮನಿರಬಾರದೇ! ಸತ್ಯಭಾಮೆಗೆ, ಈ ವಿಷಯಗಳನ್ನು ಯಾರಾದರೂ ತಿಳಿಸಿದರೆ ಮೊದಲೇ ಸಿಡುಕುಗಾತಿ

ಯಾದ ಅವಳ ಮನಸ್ಸಿನಲ್ಲಿ ಮತ್ತಷ್ಟು ಉರಿಯೇರುವುದು. (ನಾರದನನ್ನು ನೋಡಿ) ಸ್ವಾಮಿಾ, ಈಗ ಸತ್ಯಭಾಮೆಯ ವಿಚಾರವೇತಕ್ಕೆ ?

**ಕಾಮಲೇಖಿ**—(ಆತ್ಮ) ಅಷ್ಟು ತಾನೇ! ಸಂತೋಷ ಕಾಲದಲ್ಲಿ ಅವಳ ಸುದ್ದಿಯೇಕೆ! ರುಕ್ಮಿಣಿಯೊಬ್ಬಳಿದ್ದರೆ ಸಾಕು.

**ಮಕರಂದ**—(ಆತ್ಮ) ಓಹೋಹೋ ! ಈ ಪುಣ್ಯಾತ್ಮಳಿಲ್ಲಿಯೇ ಇರುವಳು. ಮುಖವು ಆಗಲೇ ಹಿಂಗುತಿಂದವಳಂತೆ ಆಗಿರುವುದು !

**ನಾರದ**—ಕೃಷ್ಣಾ ! ನೀನು ಹೇಳುವುದು ಆಶ್ಚರ್ಯವಾಗಿದೆ. ಈ ಸಂತೋಷ ಕಾಲದಲ್ಲಿ ಸತ್ಯಭಾಮೆಯ ವಿಚಾರವು ಏತಕ್ಕೆಂದು ಕೇಳುವೆಯಲ್ಲಾ ! ಆಕೆಯು ಈ ಮಹೋತ್ಸವಕ್ಕೆ ಬಂದು ಈ ಸಂತೋಷದಲ್ಲಿ ತಾನೂ ಭಾಗಿಯಾಗಬೇಕಾದುದು ಧರ್ಮವಲ್ಲವೋ ? ಬಾರದಿರುವುದು ಮಾತ್ಸರ್ಯವನ್ನು ಸೂಚಿಸುವುದಿಲ್ಲವೋ ? ಆಕೆಯು ಅಂತಹ ಅಸೂಯಾಪರಳಾದುದರಿಂದಲೇ ದೇವಲೋಕದ ಪಾರಿಜಾತ ಪುಷ್ಪವು ಆಕೆಗೆ ಲಭಿಸಲಿಲ್ಲ. ಲಕ್ಷ್ಮೀದೇವಿಯ ಅಂಶದಿಂದ ಜನಿಸಿ ಸಕಲಗುಣ ಸಂಪನ್ನೆಯಾದ ರುಕ್ಮಿಣೀದೇವಿಗಲ್ಲದೆ, ಇಂತಹ ಅಮೋಘವಾದ ಪುಷ್ಪವು ಆ ಮಾತ್ಸರ್ಯ ಮೂರ್ತಿಯಾದ ಸತ್ಯಭಾಮೆಗೆ ಲಭಿಸುವುದೆಂದರೇನು ?

**ಕಾಮಲೇಖಿ**—(ಆತ್ಮ) ಅಯ್ಯೋ ! ನಮ್ಮರಸಿಯ ದೂಷಣೆಯನ್ನು ಕೇಳಲು ನಾನು ಇಲ್ಲಿಗೆ ಬಂದಂತಾಯಿತೇ !

**ಮಕರಂದ**—(ಆತ್ಮ) ಹೊಗೆಯಾಡುತ್ತಿರುವ ಬೆಂಕಿಗೆ ಪುಳ್ಳೆಯ ಮೇಲೆ ಪುಳ್ಳೆಯನ್ನು ಹಾಕಿ ಉರಿಯೇರಿಸುತ್ತಿರುವನು. ಪುಣ್ಯಾತ್ಮ !

**ಕೃಷ್ಣ**—ಪೂಜ್ಯರೇ ! ಕೂಗಬೇಡಿ ! ಕೂಗಬೇಡಿ !! ಇಲ್ಲಿರುವ ಸತ್ಯಭಾಮೆಯ ಆಪ್ತಸಖಿಯರು ಈ ವಿಷಯಗಳನ್ನು ಅವಳಿಗೆ ತಿಳಿಸಿದರೆ ವಿರಸವಾಗುವುದು.

**ನಾರದ**—ನಿಜವಾದ ವಿಷಯವನ್ನು ತಿಳಿಸಿದೆನು. ಆದಿಲಕ್ಷ್ಮಿಯಾದ ಈ ರುಕ್ಮಿಣೀದೇವಿಯ ಸೌಂದರ್ಯವೂ, ಶಾಂತಿಯೂ, ಸೌಭಾಗ್ಯವೂ,

ಸುಗುಣವೂ, ಪುಣ್ಯವೂ, ಪೂಜ್ಯತೆಯೂ, ಆ ಗರ್ವಿಷ್ಠೆಯಾದ ಸತ್ಯಭಾಮೆಗೆ ಎಲ್ಲಿಂದ ಬರಬೇಕು ! ರುಕ್ಮಿಣಿಯ ಅಂಗುಷ್ಠದಲ್ಲಿ ಬರೆದಿರುವ ಸೌಭಾಗ್ಯವು ಆ ಭಾಮೆಯ ಹಣೆಯಲ್ಲಿ ಬರೆದಿರುವುದೇ ! ಅಲ್ಲದೆ, ಲೋಕಾತಿಶಯ ಸೌಂದರ್ಯಶಾಲಿಯಾದ ಪ್ರದ್ಯುಮ್ನಕುಮಾರನನ್ನು ಪಡೆದು, ಲಾವಣ್ಯನಿಧಿಯೆನಿಸಿರುವ ರುಕ್ಮಿಣೀದೇವಿಯಲ್ಲದೆ, ಈ ದೇವಲೋಕದ ಮಹಾಪುಷ್ಪವನ್ನು ಧರಿಸಲು ಆ ಸತ್ಯಭಾಮೆಯು ಎಂದಿಗಾದರೂ ಅರ್ಹಳಾದಾಳೇ ! ಇದೆಲ್ಲವೂ ನಿನಗೆ ತಿಳಿದಿದ್ದರೂ ಏನೂ ತಿಳಿಯದವನಂತೆ ತೋರ್ಪಡಿಸಿಕೊಳ್ಳುವೆಯಲ್ಲಾ !

**ಮಕರಂದ**—(ಆತ್ಮ) ಯೋಗಿಯಾದರೂ ಆ ಜಗಳಗಂಟಿತನವು ತಪ್ಪಲಿಲ್ಲವೋ ! ಈ ಪುಣ್ಯಾತ್ಮನಿಗೇಕೆ ಈ ಗೃಹಕೃತ್ಯ ವಿಚಾರಗಳು !

**ಕಾಮಲೇಖಿ**—(ಆತ್ಮ) ಅಯ್ಯೋ ! ಈ ಜೋಗಿಯು ನಮ್ಮ ಭಾಮೆಯನ್ನು ಎಷ್ಟು ವಿಧವಾಗಿ ಹೀಯಾಳಿಸುತ್ತಿರುವನು ! ಕೃಷ್ಣನಿಗೂ ಇದು ಹಿತವಾದುದರಿಂದಲೇ ಸುಮ್ಮನಿರುವನು. ಅಲ್ಲದೆ, ಸ್ವಲ್ಪವೂ ಅನುಮಾನಿಸದೆ ಸತ್ಯಭಾಮೆಯನ್ನು ಸ್ಮರಣೆಗಾದರೂ ತಾರದೆ ಪಾರಿಜಾತಪುಷ್ಪವನ್ನು ರುಕ್ಮಿಣಿಗೆ ತಾನೇ ಮುಡಿಸಿ, ಅವಳ ಸಿರಿಯನ್ನು ನೋಡಿ ಬೆರಗಾಗಿ ಹಿಗ್ಗಿ ಹೊಗಳಿ ಪರವಶನಾಗಿ ಆ ಜೋಗಿಯ ಮಾತುಗಳೆಲ್ಲಕ್ಕೂ ಮನಸ್ಸಿನಿಂದ ಸಮ್ಮತಿಯನ್ನು ಕೊಟ್ಟು, ಈ ನೆರೆದ ಜನಜಾಲದಲ್ಲಿ ಸತ್ಯಭಾಮೆಯನ್ನು ಅವಮಾನಕ್ಕೆ ಗುರಿಮಾಡಿರುವನು. ನಾನಿದನ್ನು ಸಹಿಸಲಾರೆನು. ಈಗಲೇ ಹೋಗಿ ಈ ವಿಚಾರವನ್ನು ಸತ್ಯಭಾಮೆಗೆ ತಿಳಿಸಿಬಿಡುವೆನು. (ಹೋಗುವಳು)

**ಮಕರಂದ**— ಕಾಮಲೇಖೆ ಸಿಡುಗುಟ್ಟಿಕೊಂಡು ಹೊರಟೇಬಿಟ್ಟಳು. ಇನ್ನು ಸತ್ಯಭಾಮೆಗೆ ಈ ವಿಷಯವು ತಿಳಿದು ಅನರ್ಥವೇ ಆಗುವುದು. ಪುಣ್ಯಾತ್ಮ ! ಈ ನಾರದರು ಬಂದರೆ ಏನಾದರೂ ಒಂದು ರಗಳೆಯನ್ನು ತರದೇ ಇರುವುದೇ ಇಲ್ಲವೋ !

**ನಾರದ**—ಶ್ರೀ ಕೃಷ್ಣಾ ! ಲಕ್ಷ್ಮೀನಾರಾಯಣ ಸ್ವರೂಪರಾದ ನಿಮ್ಮಿರ್ವ

ರನ್ನೂ ಈ ಮಹೋತ್ಸವದಲ್ಲಿ ನೋಡಿ ಪರಮಾನಂದಭರಿತನಾದೆನು. (ಆಶ್ಚರ್ಯದಿಂದ) ಓಹೋ! ಇಂತಹ ಮಹೋತ್ಸವಕ್ಕೆ ಬಲರಾಮ ದೇವನು ಏತಕ್ಕೆ ಬರಲಿಲ್ಲ?

**ಕೃಷ್ಣ**—ಪೂಜ್ಯರೇ! ಏನೋ ಕಾರ್ಯಗೌರವದಿಂದ ನಿಂತಿರಬಹುದು.

**ಮಕರಂದ**—(ಆತ್ಮ) ಸತ್ಯಭಾಮೆಯ ವಿಚಾರವಾಯಿತು. ಇನ್ನು ಬಲರಾಮ ದೇವರದು ಪ್ರಾರಂಭ! ತನಗೇತಕ್ಕೆ ಈ ಗೃಹಕೃತ್ಯಗಳು! ಈ ಮುನಿಯು ಸುಮ್ಮನಿರಬಾರದೇ!

**ನಾರದ**—ಕಾರ್ಯಗೌರವವೆಂದರೇನು? ನೀನಾದರೆ ಜಗತ್ಸಂಸಾರಿ. ಆತ ನಿಗೆ ನಿನ್ನಂತಹ ನಿರ್ಬಂಧಗಳೇನಿರುವುವು? ಒಂದು ವೇಳೆ ಇದ್ದರೂ ಈ ಮಹೋತ್ಸವಕ್ಕೆ ಆತನು ಪತ್ನೀಯುಕ್ತನಾಗಿ ಬಂದು ಸಂತೋಷಭಾಗಿ ಯಾಗಲೇ ಬೇಕಾಗಿತ್ತು. ನಾನೀಗಲೇ ಆತನ ಬಳಿಗೆ ಹೋಗಿ ವಿಷಯ ವನ್ನು ತಿಳಿಯುವೆನು.

**ಕೃಷ್ಣ**—ಆಗಲಿ. ತಾವು ಈ ಉತ್ಸವ ಸಮಯದಲ್ಲಿ ದಯಮಾಡಿಸಿ ನಮ್ಮನ್ನು ಆಶೀರ್ವದಿಸಿದುದರಿಂದ ನನಗೆ ಬಹಳ ಸಂತೋಷವಾಯಿತು.

## ದೃಶ್ಯ ೫—ದ್ವಾರಕಾನಗರದ ಅರಮನೆ.

**ನಾರದ**—೧೧ ಪಾರಿಜಾತಪುಷ್ಪವನ್ನು ಕೃಷ್ಣನಿಂದ ರುಕ್ಮಿಣಿಗೆ ಕೊಡಿಸಿ ಸತ್ಯಭಾಮೆಯನ್ನು ಹೀಯಾಳಿಸಿ ಕಲಹಬೀಜವನ್ನು ನೆಟ್ಟದಾಯಿತು. ಈ ವಿಚಾರವೆಲ್ಲವೂ ಭಾಮೆಗೆ ತಿಳಿಯಲೇ ತಿಳಿಯುವುದು. ಅದರಿಂದ ಕುಪಿ ತಳಾಗುವ ಆಕೆಯನ್ನು ಸಮಾಧಾನಪಡಿಸಲು ಕೃಷ್ಣನು ಪಾರಿಜಾತ ಪುಷ್ಪವನ್ನು ತಂದುಕೊಡಲು ಪ್ರಯತ್ನಿಸಲೇ ಬೇಕಾಗುವುದು. ಈ ಸಮ ಯದಲ್ಲಿ ತಕ್ಕ ಆಲೋಚನೆಯನ್ನು ಹೇಳಿ, ಕೃಷ್ಣನು ಇಂದ್ರನಮೇಲೆ ಕೆರಳುವಂತೆ ಮಾಡಿ ಆತನಿಂದ ಆ ದೇವೇಂದ್ರನಿಗೆ ಅಹಂಕಾರಖಂಡನೆ ಮಾಡಿಸುವೆನು. ಇನ್ನು ಬಲರಾಮನ ಬಳಿಗೆ ಹೋಗಿ ಆತನ ಕುಶಲವನ್ನು ತಿಳಿದು ಮುಂದಿನ ಕಾರ್ಯಗಳನ್ನು ಗಮನಿಸುವೆನು. (ಹೋಗುವನು.)

## ದೃಶ್ಯ ೬—ಬಲರಾಮನ ಅಂತಃಪುರ.

(ಬಲರಾಮನು ರೇವತಿಯೊಡನೆ ವಿನೋದದಿಂದ ಮಾತನಾಡುತ್ತಿರುವನು.)

**ಬಲರಾಮ**—೧೨ ಪ್ರಿಯೇ! ಲೋಕದಲ್ಲಿ ರಸಿಕನು ಭೋಗಪಡಲು ಯಾವ ಯಾವ ವಿಷಯಗಳು ಬೇಕು ಬಲ್ಲೆಯಾ?

**ರೇವತಿ**—ಪ್ರಿಯಾ! ನಿನ್ನಂತಹ ರಸಿಕಶಿಖಾಮಣಿಗೆ ತಾನೇ ಆ ವಿಚಾರವು ಅನುಭವದಿಂದ ತಿಳಿದಿರುವುದು!

**ಬಲರಾಮ**—ಕೇಳು; ಚೈತ್ರಮಾಸ, ಚಂದ್ರಕಾಂತಿ, ಚಂಚರೀಕಗಾನ, ಇವುಗಳಲ್ಲಿ, ಮಲ್ಲಿಗೆಯ ಮೊಗ್ಗು, ಮಾಕಂದಫಲ, ಮಂದಮಾರುತ, ಮತ್ತಕೋಕಿಲ, ಮಧುರಗಾನ,........ಮದಿರಾಕ್ಷಿ.

**ರೇವತಿ**—ಆಹಾ! ಇವುಗಳೆಲ್ಲವೂ ಶ್ರೇಷ್ಠವಾದುವುಗಳೇ ಸರಿ.

**ಬಲರಾಮ**—ಇವುಗಳೆಲ್ಲಕ್ಕಿಂತಲೂ ಶ್ರೇಷ್ಠವಾದುದು ಮತ್ತೊಂದಿರುವುದು; ಅದು ಯಾವುದು ಬಲ್ಲೆಯೋ?

**ರೇವತಿ**—ಅದನ್ನೂ ರಸಿಕಾಗ್ರಣಿಯಾದ ನಿನ್ನಿಂದಲೇ ತಿಳಿಯಬೇಕೆಂದಿರುವೆನು.

**ಬಲರಾಮ**—ಯಾವುದೆನ್ನುವೆಯೋ? ಮಧುರವಾದ, ಮನೋಹರವಾದ ಮಹಿಮಾಕರವಾದ, ಮಾನ್ಯವಾದ,........**ಮದ್ಯವು.**

**ರೇವತಿ**—ಹರಿ ಹರಿ! ಮೊದಲು ಹೇಳಿದವುಗಳೆಲ್ಲವೂ ರಸಿಕರಿಗೆ ಬೇಕಾದವುಗಳು. ಆದರೆ, ಬುದ್ಧಿಪಲ್ಲಟವನ್ನು ಮಾಡಿ ಗೌರವಕ್ಕೆ ಹಾನಿಯನ್ನು ತರುವ ಮದ್ಯಪಾನವು ಹಿತಕರವೇ?

**ಬಲರಾಮ**—ಅದು ಕೊಡುವ ಸುಖವನ್ನು ನೀನೇನು ಬಲ್ಲೆ! ನನ್ನ ಆಪ್ತಳಾದ ಮದಿರಾರಮಣಿಯನ್ನು ಕರೆದು, ಅವಳಿಂದ ನೂತನವಾದ, ಮನೋಹರವಾದ ಮದ್ಯವನ್ನು ತರಿಸುವೆನು. ಅದನ್ನು ಸೇವಿಸಿದರೆ, ಆಗ ಆದರಿಂದ ಉಂಟಾಗುವ ಸುಖವೂ ಸಂತೋಷವೂ, ವಿನೋದವೂ,

ವಿಲಾಸವೂ, ಎಂಥವುಗಳೆಂಬುದು ತಿಳಿಯುವುದು. ಆಗ ಅದರ ಮಹಿಮೆ ಯನ್ನು ನೀನೇ ಹೊಗಳುವೆ.

**ರೇವತಿ**—ಪ್ರಿಯಾ! ಬೇಡ ಬೇಡ. ಮದ್ಯಪಾನವು ಬೇಡ. ಮದ್ಯವನ್ನು ಸೇವಿಸತಕ್ಕವರಿಗೆ ಅದರಲ್ಲಿರುವ ದುರ್ಗುಣಗಳು ಕಾಣುವುದೇ ಇಲ್ಲ. ಪರೀಕ್ಷಿಸಿ ನೋಡಿದರೆ, ಅದರಂತಹ ನಿಂದ್ಯವಾದ ಪದಾರ್ಥವು ಲೋಕ ದಲ್ಲಿ ಯಾವುದೂ ಇಲ್ಲವೆಂದು ನಾನು ಹಿಂದೆಯೇ ಅನೇಕಾವೃತ್ತಿ ವಿಜ್ಞಾಪಿಸಿಕೊಂಡಿರುವೆನಲ್ಲವೇ ?

**ಬಲರಾಮ**—ನಿನಗೆ ಬುದ್ಧಿಯಿಲ್ಲ, ವಿವೇಕವಿಲ್ಲ, ವಿನೋದವಿಲ್ಲ, ವಿಲಾಸವಿಲ್ಲ, ಕಾಲಕ್ಕೆ ತಕ್ಕ ನಾಗರಿಕತೆಯಿಲ್ಲದೆ ಪೂರ್ವಕಾಲದ ಮಡ್ಡಿಮುತ್ತೈದೆ ಯರಂತೆ ಗೊಡ್ಡುಪುರಾಣಗಳನ್ನು ಹೇಳುವೆಯಲ್ಲಾ ! ಸಾಕು ನಿಲ್ಲಿಸು. ನನ್ನ ಪ್ರಿಯರಮಣಿಯಾದ ಮದಿರಾಂಗನೆಯು ತರುವ ಮದ್ಯವು ಹೇಗಿರುವುದೆಂಬುದನ್ನು ತೋರಿಸುವೆನು. (ಪಕ್ಕಕ್ಕೆ ನೋಡಿ) ಮದಿರಾ ! ಪ್ರಿಯಮದಿರಾ ! ಎಲ್ಲಿರುವೆ ? ಮಧುಕಲಶದೊಡನೆ ಬಾ, ಬೇಗ ಬಾ ! ನಿನ ಗಾಗಿ ಕಾದಿರುವೆನು.

(ಒಳಗೆ) ಪ್ರಿಯಾ, ಇದೋ ಬಂದೆನು ! ಬಂದೆನು !

**ಬಲರಾಮ**—(ಸಂತೋಷದಿಂದ) ಅದೋ ! ಅದೋ ! ರೇವತೀ ! ಸ್ಮರಿಸಿದ ಮಾತ್ರದಿಂದ ನನ್ನ ಪ್ರಿಯಮದಿರೆಯು ಬಂದೇಬಿಟ್ಟಳು ! ಅದೋ ! ಮಧುಕಲಶದೊಡನೆ ಬರುತ್ತಿರುವಳು. ಆಹಾ! ಎಷ್ಟು ಮನೋಹರವಾಗಿರು ವಳು ! ಪ್ರಿಯೇ ! ಬಾ, ಬೇಗ ಬಾ ! ನನ್ನನ್ನು ಆಲಿಂಗಿಸು ; ಆನಂದಿಸು.

**ಮದಿರೆ**—(ಮಧುಕಲಶದೊಡನೆ ಪ್ರವೇಶಿಸಿ) ೧೩ ಪ್ರಿಯಾ ! ಇದೋ ! ನಿನ ಗಾಗಿ ನೂತನವಾದ ದಿವ್ಯಮಧುವನ್ನು ತಂದಿರುವೆನು. ಸ್ವೀಕರಿಸು.

**ಬಲರಾಮ**—ಬಹಳಸಂತೋಷ ! ಬಹಳಸಂತೋಷ ! ಎಲ್ಲಿ ? ಕೊಡು !

**ರೇವತಿ**—೧೪ ಅಯ್ಯೋ ! ಪ್ರಿಯಾ ! ಮದ್ಯವನ್ನು ಸೇವಿಸಬೇಡ. ಬೇಡ

ಬೇಡ! ನಿಲ್ಲಿಸು ; ಮದ್ಯಪಾನದಿಂದುಂಟಾಗುವ ಅನರ್ಥಗಳನ್ನು ನೀನು ತಿಳಿದೇ ಇರುವೆ. (ಮದಿರೆಯನ್ನು ನೋಡಿ) ಎಲೌ! ಮದಿರೇ! ನನ್ನ ಪ್ರಿಯನಿಗೆ ಇದನ್ನು ಕೊಡಬೇಡ! ಬೇಡ!

**ಮದಿರೆ**— (ಮಧುಕಲಶವನ್ನು ಬಲರಾಮನಕೈಗೆ ಕೊಟ್ಟು) ನಿನ್ನ ಪ್ರಿಯನಿಗೆ ನಾನು ಕೊಡಲಿಲ್ಲ. ನನ್ನ ಪ್ರಿಯನಿಗೆ ನಾನು ಕೊಟ್ಟೆನು.

**ರೇವತಿ**—ಹಾಗಾದರೆ ನನ್ನ ಪ್ರಿಯನಿಂದ ನಾನದನ್ನು ಕಿತ್ತುಕೊಳ್ಳುವೆನು. (ಬಲರಾಮನ ಕೈಯಿಂದ ಮಧುಕಲಶವನ್ನು ಕೀಳಲು ಹೋಗುವಳು.)

**ಮದಿರೆ**—ಪ್ರಿಯಾ! ಪ್ರಿಯಾ! ಕೊಡಬೇಡ. ಕೊಡಬೇಡ! ನೀನು ಮಧುವನ್ನು ಕುಡಿ; ಬ್ರಹ್ಮಾನಂದವುಂಟಾಗುವುದು.

**ರೇವತಿ**—ಪ್ರಿಯಾ! ಬೇಡ ಬೇಡ! ನಿಜವಾಗಿಯೂ ಕುಡಿಯಬೇಡ.

**ಬಲರಾಮ**—ಅಯ್ಯೋ! ಇವರಿಬ್ಬರ ಮಧ್ಯದಲ್ಲಿ ನಾನು ಉಭಯಸಂಕಟಕ್ಕೆ ಸಿಕ್ಕಿದೆನಲ್ಲಾ! ಇಬ್ಬರು ಪತ್ನಿಯರ ಗದ್ದಲವೇ ಇಷ್ಟಾಗಿರುವಲ್ಲಿ, ಆ ಪುಣ್ಯಾತ್ಮ ನಮ್ಮ ಕೃಷ್ಣನು ಅಷ್ಟುಮಂದಿ ಪತ್ನಿಯರಲ್ಲಿ ಇನ್ನೆಷ್ಟು ಹೆಣಗುತ್ತಿರುವನೋ ಕಾಣೆ!

**ರೇವತಿ**—ಅವರು ಯಾರೂ ಇವಳಂತೆ ದುರ್ಮಾರ್ಗವನ್ನು ಕಲಿಸತಕ್ಕವರಲ್ಲವಾದುದರಿಂದ ಶ್ರೀಕೃಷ್ಣನಿಗೆ ಇಂತಹ ಕಷ್ಟವೇ ಇಲ್ಲ.

**ಮದಿರೆ**—ರೇವತೀ, ಏನೆಂದೆ? ನಾನು ದುರ್ಮಾರ್ಗವನ್ನು ಕಲಿಸತಕ್ಕವಳೇ?

**ರೇವತಿ**—ಸಂದೇಹವೇನು? ನಿನ್ನ ವಶನಾದವನು ಲೋಕದಲ್ಲಿ ಯಾವನು ತಾನೆ ಸನ್ಮಾರ್ಗದಲ್ಲಿರುವನು?

**ಮದಿರೆ**—ಪ್ರಿಯಾ! ಪ್ರಿಯಾ! ನೋಡಿದೆಯೋ? ಇವಳ ತಂಟೆಮಾರಿತನವನ್ನು! ಎಲೌ! ರೇವತೀ, ನನ್ನನ್ನು ದೂರುವೆಯಾ? ಎಚ್ಚರಿಕೆ! ನಿನಗೆ ನನ್ನ ಪ್ರಿಯನಿಂದ ತಕ್ಕ ಶಿಕ್ಷೆಯನ್ನು ಮಾಡಿಸಿಬಿಡುವೆನು.

**ರೇವತಿ**—ವಿವೇಕಶಾಲಿಯಾದ ಪ್ರಿಯನು ನನ್ನನ್ನೆಂದಿಗೂ ಶಿಕ್ಷಿಸಲಾರನು.

**ಮದಿರೆ**—ಪ್ರಿಯಾ! ನೀನು ಮೊದಲು ಮಧುವನ್ನು ಕುಡಿ ಮೊದಲು ಕುಡಿ.

**ಬಲರಾಮ**—ಪ್ರಿಯೇ! ರೇವತೀ ಸುಮ್ಮನಿರು. ಮದಿರೇ! ಮಧುವನ್ನು ಕೊಡು, ಮೊದಲು ಕೊಡು. ಕುಡಿದಾನಂದಪಡುವೆನು.

**ರೇವತಿ**—ಬೇಡ ಬೇಡ! ಪ್ರಿಯಾ! ಈಕೆಯು ನಿನಗೆ ಮಧುಸೇವನೆಯನ್ನು ಮಾಡಿಸಿ, ನಿನ್ನ ಮಾನವನ್ನೂ, ನಿನಗೆ ನನ್ನಲ್ಲಿರುವ ಪ್ರೀತಿಯನ್ನೂ ಕಳೆದು ನಿನ್ನನ್ನು ತನ್ನ ವಶಮಾಡಿಕೊಳ್ಳುವಳು. ಆದುದರಿಂದ ನೀನು ನಿಜ ವಾಗಿಯೂ ಮಧುವನ್ನು ಸೇವಿಸಬಾರದು.

**ಬಲರಾಮ**—ರೇವತೀ! ಅದನ್ನು ಸೇವಿಸುವುದರಿಂದುಂಟಾಗುವ ಸಂತೋ ಷವು ನಿನಗೆ ತಿಳಿಯದು. ನೀನು ಸ್ವಲ್ಪ ಸೇವಿಸಿ ನೋಡು. ಆಗ ಅದ ರಿಂದಾಗುವ ಆನಂದವು ನಿನಗೂ ತಿಳಿಯುವುದು.

**ಮದಿರೆ**—ಎಲೌ ರೇವತೀ, ಹಾಗೆ ಮಾಡು. ಬೇಕಾದರೆ, ನಿನಗೆ ಮತ್ತಷ್ಟು ಮದ್ಯವನ್ನು ನನ್ನ ಸಖಿಯಾದ ವನಮೋಹಿನಿಯಿಂದ ತರಿಸಿಕೊಡುವೆನು.

**ರೇವತಿ**—ಬೇಡ! ಬೇಡ! ಏನೂಬೇಡ! ನಾನೊಲ್ಲೆನು! ಪ್ರಿಯಾ! ಈ ಮದ್ಯ ಚಾಪಲ್ಯವನ್ನು ಬಿಡು. ನಿನ್ನ ಪಾದಕ್ಕೆರಗಿ ಬೇಡಿಕೊಳ್ಳುವೆನು. (ಅಳುವಳು.)

**ಬಲರಾಮ**—(ಸಂತೈಸಿ) ರೇವತೀ! ಅಳಬೇಡ! ಬಿಡುವೆನು! ಮದ್ಯಸೇವನೆ ಯನ್ನು ಬಿಟ್ಟುಬಿಡುವೆನು.

**ರೇವತಿ**—ಸಂತೋಷ. ಪ್ರಿಯಾ ಸಂತೋಷ. ಬಾ ಹೋಗುವ. (ಕೈಹಿಡಿದು ಕರೆದುಕೊಂಡು ಹೋಗಲು ಯತ್ನಿಸುವಳು.)

**ಮದಿರೆ**—(ಬಲರಾಮನ ಕೈಯ್ಯನ್ನು ಹಿಡಿದೆಳೆದು) ಪ್ರಿಯಾ! ಮದ್ಯವನ್ನು ಬಿಡು ವೆಯಾ? ನನ್ನನ್ನು ನೀನು ಗೋಮಂತಪರ್ವತದಲ್ಲಿ ವರಿಸಿದಾಗ, "ನಿನ್ನನ್ನು ಕೈ ಬಿಡುವುದಿಲ್ಲ"ವೆಂದು ನನಗೆ ಅಭಯವನ್ನು ಕೊಡಲಿಲ್ಲವೇ?

ಮರೆತೆಯಾ? ಮಾತಿಗೆ ತಪ್ಪುವೆಯಾ? ನೀನೀಗ ನನ್ನ ಮಧುವನ್ನು ಸೇವಿಸದಿದ್ದರೆ ನಿನ್ನ ನಾಲಿಗೆಯೇನಾಗುವುದು?

**ರೇವತಿ**—ಶುದ್ಧವಾಗಿರುವುದು.

**ಮದಿರೆ**—ಶುದ್ಧವಾಗಿರುವುದೋ? ಅಬದ್ಧವನ್ನು ನುಡಿದು ಅಪರಿಶುದ್ಧವಾಗುವುದೋ? ಸಾಕು ನಿಲ್ಲಿಸು, ಪ್ರಿಯಾ! ನೀನು ಈ ಮದ್ಯವನ್ನು ಸೇವಿಸಲೇ ಬೇಕು. ಇಲ್ಲವಾದರೆ ನಾನು ಪ್ರಾಣತ್ಯಾಗ ಮಾಡಿಕೊಳ್ಳುವೆನು. (ಅಳುವಳು)

**ಬಲರಾಮ**—ಅಯ್ಯೋ! ಮದಿರೇ! ನನ್ನ ಪ್ರಾಣಪ್ರಿಯಳಾದ ಮದಿರೇ ಬೇಡ! ಬೇಡ; ಇದೋ ಕುಡಿದೆನು. (ಮದ್ಯವನ್ನು ಕುಡಿಯುವನು.)

**ರೇವತಿ**—ಅಯ್ಯೋ! ಕಡೆಗೂ ಪ್ರಿಯನು ಮದ್ಯವನ್ನು ಕುಡಿದೇ ಬಿಟ್ಟನು. ಅಯ್ಯೋ! ಆ ಕಲಶದಲ್ಲಿದ್ದುದೆಲ್ಲವನ್ನೂ ಕುಡಿದೇ ಬಿಟ್ಟನು!

**ಬಲರಾಮ**—(ನಗೆಯಿಂದ) **ಓಹೋ** ಮದಿರಾ! ಮದಿರಾ! ಆಹಹಾ! ಎಷ್ಟು ಮಧುರ! ಏನು ಮಧುರ! ಆಹಾ! ಮಧುವೇ! ಮಧುವನ್ನು ತಂದ ವಧುವೇ! ಇದೆಂತಹ ಮುದವೇ! ಇದರಿಂದ ಏನು ಮದವೇ! ಅಯ್ಯೋ! ರೇವತೀ! ರೇವತೀ! ಎಷ್ಟು ಚೆನ್ನಾಗಿರುವುದು! ನೀನು ಸ್ವಲ್ಪ ಕುಡಿ ಬಾ! ಬಾ ರುಚಿ ನೋಡು ಬಾ!

**ಮದಿರೆ**—ಪ್ರಿಯಾ! ಇನ್ನೊಂದು ಬಟ್ಟಲನ್ನು ಕೊಡಲೇ?

**ಬಲರಾಮ**—ಕೊಡು! ಕೊಡು! ತಾ! ತಾ! ಬೇಗನೆತಾ!

**ರೇವತಿ**—ಬೇಡ! ಬೇಡ! (ಕೀಳಲು ಹೋಗುವಳು.)

**ಮದಿರೆ**—(ಕೈಯ್ಯನ್ನು ಕಿತ್ತುಹಾಕಿ) ಸಾಕು! ಸುಮ್ಮನಿರು ನನ್ನ ಪ್ರಿಯನಿಗೆ ನಾನು ಉಪಚಾರಮಾಡಲು ನಿನ್ನ ಅಡ್ಡಿಯೇ?

**ರೇವತಿ**—ನೀನು ಮಾಡುವುದು ಉಪಚಾರವಲ್ಲ. ಅಪಚಾರ! ಅಯ್ಯೋ!

**ಬಲರಾಮ**—(ಮಧುಕಲಶವನ್ನು ತಂದು ರೇವತಿಯ ಕೈಯನ್ನು ಹಿಡಿದು) ರೇವತೀ ನೀನೂ ಕುಡಿ! ಮದಿರೆಯೂ ಕುಡಿಯುವಳು! ನಾನೂ ಕುಡಿಯುವೆನು!

ನಾವೆಲ್ಲರೂ ಸಂತೋಷದಿದಿಂದ ಕೂಡಿ ಆನಂದಿಸೋಣ! ವಿನೋದಿಸೋಣ! ಇದೋ ತೆಗೆದುಕೋ. (**ಕುಡಿಸಲು ಹೋಗುವನು.**)

**ರೇವತಿ**—ಅಯ್ಯೋ! ಅಯ್ಯೋ! ಇನ್ನೇನು ಗತಿ! ಇನ್ನೇನು ಗತಿ! ಪ್ರಿಯಾ! ಬೇಡ ಬೇಡ! ನನ್ನನ್ನು ಕ್ಷಮಿಸು.

**ಬಲರಾಮ**—(ಮಧುಪಾನದ ಭ್ರಮೆಯಿಂದ) ನೀನು ಕುಡಿದರೆ ಕ್ಷಮಿಸುವೆನು. ಕುಡಿ. ಮೊದಲು ಕುಡಿ!

**ರೇವತಿ**—(**ಬಿಡಿಸಿಕೊಂಡು ಅಳುತ್ತಾ**) ಪರಮಾತ್ಮಾ! ನನ್ನ ಪ್ರಿಯನನ್ನು ಈ ಮಧುದೇವತೆಯ ಕೈಯಿಂದ ಬಿಡಿಸತಕ್ಕವರು ಯಾರೂ ಇಲ್ಲವೇ!

**ನಾರದ**—(ಪ್ರವೇಶಿಸಿ) ಏನಿದು? ರೇವತಿದೇವೀ! ಈ ಕಾತರವೇನು? ಈ ರೋದನವೇನು? ಈ ಗದ್ದಲವೇನು? ಏನು ವಿಚಾರ?

**ರೇವತಿ**—ಪೂಜ್ಯರೇ! ಈ ಮದಿರಾಂಗನೆಯು ನನ್ನ ಪ್ರಿಯನಿಗೆ ಮದ್ಯಸೇವನೆಯನ್ನು ಮಾಡಿಸಿರುವಳು. ಆತನು ನನ್ನನ್ನೂ ಕುಡಿಯುವಂತೆ ಬಲಾತ್ಕರಿಸುತ್ತಿರುವನು. ಈ ಸಮಯದಲ್ಲಿ ತಾವು ದಯಮಾಡಿಸಿದುದು ಬಹಳ ಉತ್ತಮವಾಯಿತು. ತಾವಾದರೂ ನನ್ನ ಪ್ರಿಯನಿಗೆ ತಿಳಿವಳಿಕೆಯನ್ನು ಹೇಳಬೇಕಾಗಿ ಬೇಡುವೆನು.

**ನಾರದ**—ಓಹೋ! ಸರಿ! (**ಬಲರಾಮನನ್ನು ನೋಡಿ**) ಬಲರಾಮದೇವಾ!

**ಬಲರಾಮ**— ಯಾರದು? (**ನೋಡಿ ಹುಚ್ಚುಹುಚ್ಚಾಗಿ**) ನಾರದರೇನು? ಓಹೊಹೋ! ಬನ್ನಿ ಬನ್ನಿ ಬನ್ನಿ........ನಮಸ್ಕಾರ.

**ನಾರದ**—ಏನಿದು? ಬಲರಾಮದೇವಾ! ಏನಿದು ವಿಪರೀತವು?

**ಬಲರಾಮ**—ನಾರದರೇ, ಇದು, ಅಮೃತವು.

**ನಾರದ**—ಅದು ಅಮೃತವಲ್ಲ! ವಿಷವು; ವಿಷವೆಂದು ತಿಳಿ!

**ಬಲರಾಮ**—ಅಲ್ಲ, ನಾರದರೇ, ವಿಷವಲ್ಲ ನೀವೂ ಬೇಕಾದರೆ ಕುಡಿದು ನೋಡಿ; ಮದಿರಾ ಕೊಡು, ನಾರದರಿಗೆ ಒಂದು ಬಟ್ಟಲನ್ನು ಕೊಡು.

**ನಾರದ**—ಬಲರಾಮಾ! ನೀನು ರಾಜನು! ಜನಪೂಜಿತನು! ಹೀಗಿರುವಲ್ಲಿ ನೀನು ಯಾರೆಂಬುದನ್ನೇ ನೀನು ಮರೆತುಬಿಟ್ಟಿರುವೆಯಲ್ಲಾ!

**ಬಲರಾಮ**—ಇಲ್ಲ! ಮರೆಯಲಿಲ್ಲ! ನಾರದರೇ ನಾನು ನಾನೇ! ನೀವು ನೀವೇ! ತಿಳಿಯಿತೋ!

**ನಾರದ**—ಛಿ! ಛಿ! ಛಿ! ಬಲರಾಮನು ಎಂತಹ ಅವಿವೇಕಕ್ಕೆ ಈಡಾದನು! ಎಲೌ! ಮದಿರೇ! ನಿನ್ನನ್ನು ಬ್ರಹ್ಮನು ಸೃಷ್ಟಿಸಿದುದು ಎಷ್ಟು ಅನ್ಯಾಯವಾಯಿತು! ಅಯ್ಯೋ!

**ಮದಿರೆ**—ಅನ್ಯಾಯವಾಯಿತೋ! ಉಪಕಾರವಾಯಿತೋ! ನಾನಿಲ್ಲದಿದ್ದರೆ ಜನರಿಗೆ ಆಯಾಸವನ್ನು ಕಳೆದು ಆನಂದವನ್ನು ಕೊಡುವವರು ಯಾರು?

**ನಾರದ**—ಛೀ! ಸಾಕು. ಇದೋ, ಬಲರಾಮನ ಅವಿವೇಕವನ್ನು ನೋಡು! ಇದೇ ನೀನು ಕೊಡುವ ಆನಂದವು. ಎಂತಹ ಗೌರವಶಾಲಿಯಾಗಲಿ ಮದ್ಯಸೇವನೆಯನ್ನಾರಂಭಿಸಿದರೆ ಸಾಕು, ಅವನ ಗೌರವವೆಲ್ಲವೂ ಮಣ್ಣುಪಾಲಾಗುವುದು; ಲಕ್ಷಾಧಿಕಾರಿಯಾದರೂ ಭಿಕ್ಷುಕನಾಗುವನು. ಪಂಡಿತನಾದರೂ ಪಾಮರರಿಂದ ತಿರಸ್ಕೃತನಾಗುವನು. ಮಹಾ ಪದವೀಧರನಾದರೂ ಮಹದಾಪದವನ್ನೇ ಪಡೆಯುವನು. ದಿನದಿನಕ್ಕೆ ದೇಹವೂ, ಬುದ್ಧಿಯೂ, ಚಿತ್ತವೂ, ನಡೆತೆಯೂ, ವ್ಯತ್ಯಾಸವಾಗುತ್ತ ಕಡೆಗೆ ಅವನ ಜನ್ಮವೇ ಬೇರೆಯಾಗುವುದು, ದೈವಭಕ್ತಿಯು ದೂರವಾಗುವುದು, ಕರ್ಮವು ಕಾಡುಪಾಲಾಗುವುದು, ಜ್ಞಾನವು ಶೂನ್ಯವಾಗುವುದು, ನಡತೆಯು ನಾಶವಾಗುವುದು, ಮಾನವು ಹೀನವಾಗುವುದು. ಚರ್ಯೆಗಳು ಚಪಲವಾಗುವುವು, ಮತಿಯು ಮಂಕಾಗುವುದು, ದೇಹಕ್ಕೆ ದಾಹವುಂಟಾಗುವುದು, ಆರೋಗ್ಯಕ್ಕೆ ಅಂತವಾಗುವುದು, ಯೌವನದಲ್ಲಿಯೇ ವಾರ್ಧಿಕ್ಯವು ಬರುವುದು, ಅಲ್ಪರು ಆಪ್ತರಾಗುವರು, ಅಕಾರ್ಯಗಳು ಅಧಿಕವಾಗುವುವು, ಭಾಗ್ಯವು ಬಯಲಾಗುವುದು,

ದರಿದ್ರಲಕ್ಷ್ಮಿಯ ದಯವು ಸಂಪೂರ್ಣವಾಗಿ ಬರುವುದು, ಕಟ್ಟಕಡೆಗೆ ತನ್ನ ದುರಭ್ಯಾಸದ ಫಲವು ತನಗೆ ಗೋಚರಕ್ಕೆ ಬಂದು, ಇಹಪರ ಸುಖಗಳೆರಡನ್ನೂ ಕಳೆದುಕೊಂಡು, ತನ್ನ ಜನ್ಮವನ್ನು ತಾನೇ ಪರಿಪರಿಯಾಗಿ ದೂಷಿಸಿಕೊಂಡು, ವ್ಯಥೆಯಿಂದಲೇ ತನ್ನ ದೇಹವನ್ನಂತ್ಯ ಮಾಡಿಕೊಂಡು ತನ್ನ ಪಾಪಶೇಷವನ್ನು ಅನುಭವಿಸಲು ಅನೇಕ ಜನ್ಮಗಳನ್ನೆತ್ತಿ ನಾನಾದುಃಖಗಳನ್ನನುಭವಿಸಬೇಕಾಗುವುದು. ಆದುದರಿಂದ, ಎಲೌ! ಮಧುದೇವತೆಯೇ! ನಿನ್ನನ್ನು ನಂಬಿದವನ ಗತಿಯು ದುರ್ಗತಿಯಲ್ಲದೆ ಬೇರೆಯಲ್ಲ. ಆದಕಾರಣ ನೀನು ಸಂಸಾರಿಗಳ ಮನೆಗೆ ಬರಲು ಅರ್ಹಳಲ್ಲ. ಹೊರಡು. ಅರಣ್ಯದಲ್ಲಿರು. ನೀನಿರತಕ್ಕ ಸ್ಥಳವು ಅಪರಿಶುದ್ಧವಾದುದು, ಅಸಹ್ಯಕರವಾದುದು, ಪಾಪಮಯವಾದುದು. ಅದರಿಂದ ವಿವೇಕಶಾಲಿಗಳು ನಿನ್ನನ್ನು ಕಂಡರೆ ಉಗುಳುವರು. ಹೊರಡು ಇಲ್ಲಿಂದ ಮೊದಲು ಹೊರಡು. ಬಲರಾಮಾ! ಇವಳನ್ನು ಮೊದಲು ಇಲ್ಲಿಂದ ತೊಲಗಿಸು.

**ಬಲರಾಮ**—ನಾರದರೇ! ನಾರದರೇ! ಅವಳು ನನಗೆ ಮಧುವನ್ನು ತಂದುಕೊಟ್ಟಳು. ಪ್ರಿಯೇ! ನಾರದರು ಹೇಳುತ್ತಿರುವರು. ನೀನುಹೋಗು.

**ನಾರದ**—ಎಲೌ! ಮದಿರಾಂಗನೇ, ಹೊರಡು. ಇಲ್ಲವಾದರೆ ನೀನು ನಮ್ಮಾಗ್ರಹಕ್ಕೆ ಗುರಿಯಾಗುವೆ, ನಡೆ.

**ಮದಿರೆ**—ಅಯ್ಯೋ! ಈ ಮುನಿಯು ನಮ್ಮ ವಿಲಾಸಕ್ಕೆ ಕಂಟಕನಾಗಿ ಬಂದನಲ್ಲಾ! ಪ್ರಿಯಾ! ನಾನು ಹೋಗಲೇ? (ಅಳುವಳು).

**ಬಲರಾಮ**—ಹೊರಡು; ನಗುತ್ತಾ ಹೊರಡು; ಅಳಬೇಡ ಹೋಗು.

**ರೇವತಿ**—ಈಗ ನನಗೆ ಬಹಳ ಸಂತೋಷವಾಯಿತು. ನಾರದರೇ, ನಿಮಗೆ ಅನಂತ ನಮಸ್ಕಾರಗಳು.

**ನಾರದ**—ಬಲರಾಮಾ! ನೀನು ಮದ್ಯಕ್ಕೆ ವಶನಾಗಿರುವೆ. ಸ್ವಲ್ಪ ವಿಶ್ರಮಿ

ನಿಕೋ! ರೇವತೀದೇವೀ! ನೀನೀತನನ್ನು ಉಪಚರಿಸು. (ಆತ್ಮ) ನಾನೀಗಲೇ ಹೋಗಿ ಕೃಷ್ಣನಿಗೆ ಈ ವಿಚಾರವನ್ನು ತಿಳಿಸಿ ಈತನಿಗೆ ಮದ್ಯದ ಮದಕ್ಕೆ ತಕ್ಕ ಪ್ರತಿಕ್ರಿಯೆಯನ್ನು ಮಾಡಿಸುವೆನು. (ಹೋಗುವನು.)

## ದೃಶ್ಯ ೭—ಅರಮನೆಯ ಮುಂದೆ ಮಕರಂದನ ಪ್ರವೇಶ.

**ಮಕರಂದ**—ಪುಣ್ಯಾತ್ಮ! ನಾರದರು ಒಂದರೆ ಏನಾದರೂ ಒಂದು ಗದ್ದಲವನ್ನು ಹಚ್ಚದೆ ಇರುವುದೇ ಇಲ್ಲ. ಪಾರಿಜಾತ ಪುಷ್ಪವನ್ನು ತಂದು ಕೊಟ್ಟ ಪುಣ್ಯಾತ್ಮನು ಬಾಯಿಗೆ ಬೀಗವನ್ನು ಹಾಕಿಕೊಂಡು ಸುಮ್ಮನಿರಬಾರದೇ! ಆ ರುಕ್ಮಿಣಿಯನ್ನು ಹೊಗಳಿದ! ಹೊಗಳಿದ! ಹೊಗಳಿದ!! ಅದೇನು ಹೊಗಳಾಟ! ಓಹೋಹೋ! ಲಕ್ಷ್ಮೀಸ್ವರೂಪಳಂತೆ! ಪರಮಸೌಂದರ್ಯವತಿಯಂತೆ! ಪ್ರದ್ಯುಮ್ನಕುಮಾರನನ್ನು ಹೆತ್ತವಳಂತೆ! ಇದೆಲ್ಲವೂ ಎಲ್ಲರಿಗೂ ತಿಳಿದಿದ್ದರೂ ತಾನು ವಿಧವಿಧವಾಗಿ ಹೊಗಳಿ ಆಕೆಯನ್ನು ಬೆರಗುಮಾಡಿ ಬೆಟ್ಟದಮೇಲೆ ಕುಳ್ಳಿರಿಸಿದನು. ಅದೂ ಹೋಗಲೆಂದರೆ, ಪಾಪ! ಆ ಸತ್ಯಭಾಮೆಯನ್ನು, ಸವತಿಯರ ಎದುರಲ್ಲಿ, ಸಖಿಯರ ಎದುರಲ್ಲಿ, ದೂತಿಯರ ಎದುರಲ್ಲಿ, ನಾನಾ ವಿಧವಾಗಿ ದೂರಿ ಹೀಯಾಳಿಸಿಬಿಟ್ಟನು. ಈ ಜೋಗಿಗೇತಕ್ಕೆ ಈ ರಾಗದ್ವೇಷಗಳೂ, ಈ ಸಂಸಾರ ವಿಚಾರಗಳೂ, ಈ ಕುಹಕ ಕುತ್ಸಿತಗಳು! ವಿರಸಹಚ್ಚಿ ವಿನೋದವನ್ನು ನೋಡುವುದೇ ಈ ಮಹಾನುಭಾವನ ಸ್ವಭಾವ. ಹೀಗಿದ್ದರೂ, ನಮ್ಮ ಕೃಷ್ಣಪರಮಾತ್ಮನಿಗೆ ನಾರದರೆಂದರೆ ಪರದೇವತಾಸ್ವರೂಪ. ಎಲ್ಲರಿಗೂ ಅವರಮಾತೇ ವೇದವಾಕ್ಯ. ಆಗುವ ರಗಳೆ ಮಾತ್ರ ಅಗಾಧ. (ಮುಂದೆ ನೋಡಿ) ಅದು ಯಾರು ಮುಂದೆ ಬರುತ್ತಿರುವರು! ಓಹೋ! ಸತ್ಯಭಾಮೆಯ ಸಖಿಯಾದ ಕಾಮಲೇಖೆಯು! ಸಿಡುಗುಟ್ಟಿಕೊಂಡು ಇತ್ತಲೇ ಬರುತ್ತಿರುವಳು. ಕಾಮಲೇಖೇ!

(ಕಾಮಲೇಖೆಯು ಪ್ರವೇಶಿಸಿ ಮಾತನಾಡದೆ ಹೋಗುತ್ತಿರುವಳು.)

**ಮಕರಂದ**—(ತಡೆದು) ಅಬ್ಬಬ್ಬಬ್ಬಾ! ಇದೇನು ಸಿಡುಕು........ಇದೇನು ಬೆಡಗು! ಏನು ಗುಡುಗು! ಅಹಾಹಾ! ಕಾಮಲೇಖೇ ನಿನ್ನ ಮೂಗಿನ ಕೊನೆ ಎಷ್ಟು ಉದ್ದವೇ! ಕೋಪದಿಂದ ಒಂದು ಮೊಳದುದ್ದ ಸಾಗಿ ಬಿಟ್ಟಿರುವುದಲ್ಲಾ! ಅದೇನು ಸಮಾಚಾರ?

**ಕಾಮಲೇಖೆ**—(ಸಿಡುಕಿನಿಂದ) ಮಕರಂದಾ! ನಾನು ನಿನ್ನೊಡನೆ ವಿನೋದ ಮಾಡುವುದಕ್ಕೆ ಬರಲಿಲ್ಲ. ನನಗೆ ಮೊದಲು ದಾರಿಯನ್ನು ಬಿಡು.

**ಮಕರಂದ**—ನೀನು ಹೀಗೆ ಬಂದುದೇ ನನಗೆ ವಿನೋದವಾಯಿತು. ದಾರಿಯನ್ನು ಬಿಡುವುದು ಇರಲಿ; ಸ್ವಲ್ಪ ತಾಳು; ಅದೇನು ಸಮಾಚಾರ? ಹುಬ್ಬುಗಳು ಉಬ್ಬಿ ಕುಣಿದಾಡುತ್ತಿವೆ! ಕಣ್ಣುಗಳು ಬಣ್ಣವೇರಿವೆ! ನೀನು ಬರುವ ರಭಸಕ್ಕೆ ದಾರಿಯಲ್ಲಿ ಎಷ್ಟು ಮಂದಿಯನ್ನು ಉರುಳಿಸಿ ಬಿಟ್ಟುಬಂದೆಯೋ ಕಾಣೆ! ಹೀಗೆ ದುರ್ಗಿಯಂತೆ ಬಂದಿರುವೆಯಲ್ಲಾ! ಏನು ಕಾರಣ?

**ಕಾಮಲೇಖೆ**—ಎಲವೋ! ಮಕರಂದಾ! ನಿನಗೆ ಹುಚ್ಚು ಹಿಡಿದಿರುವುದೋ! ಅಥವಾ ನಾರದರ ಉಪದೇಶವಾಯಿತೋ! ಆ ಜೋಗಿಯು ನಮ್ಮ ಒಡೆತಿಯಾದ ಭಾಮೆಯನ್ನು ದೂರಿದನು. ನೀನು ನನ್ನಲ್ಲಿ ಹುಚ್ಚು ಹುಚ್ಚಾಗಿ ಹರಟುತ್ತಿರುವೆ. ನಿನಗೆ ತಲೆ ತಿರುಗುವುದೋ ಹೇಗೆ?

**ಮಕರಂದ**—ನನಗೆ ತಲೆತಿರುಗುವುದೂ ಇಲ್ಲ, ಕಾಲು ತಿರುಗುವುದೂ ಇಲ್ಲ; ನಾರದರ ಉಪದೇಶವೂ ಇಲ್ಲ. ನಿನಗೆ ಅವರ ಉಪದೇಶವೇನಾದರೂ ಆಗಿರಬಹುದು! ಆದುದರಿಂದಲೇ ನಿನಗೆ ಈ ಆವೇಶವು ಬಂದಿರಬೇಕು! ಅದಿರಲಿ; ಪಾಪ! ನಾರದರು ನಿಮ್ಮ ಭಾಮೆಯನ್ನು ಏನೆಂದು ದೂರಿದರು?

**ಕಾಮಲೇಖೆ**—ನೀನು ಕೇಳಲೇ ಇಲ್ಲವೇನೋ! ಆಗ ಕೇಳಿ ಸಂತೋಷಪಟ್ಟುದಲ್ಲದೆ ಈಗಲೂ ನನ್ನಿಂದ ಆ ಮಾತನ್ನು ಹೇಳಿಸಿ, ಕೇಳಿ ಆನಂದಪಡಬೇಕೆಂದಿರುವೆಯೋನೋ ಪಾಪ! ಸಾಕು. ಬಾಯಿ ಮುಚ್ಚು; ಹುಚ್ಚಾ!

**ಮಕರಂದ**—ಅಬ್ಬಬ್ಬಾ! ಕಾಮಲೇಖೇ! ಎಂತಹ ಗಂಡುಬೀರಿಯೇ ನೀನು! ಹೋಗಲಿ ಬಿಡು; ಈಗ ನೀನು ಎಲ್ಲಿಗೆ ಹೋಗುತ್ತಿರುವೆ?

**ಕಾಮಲೇಖೆ**—ಆ ವಿಚಾರವು ನಿನಗೇತಕ್ಕೆ?

**ಮಕರಂದ**—ಕೇಳಿ ತಿಳಿದುಕೊಳ್ಳುವುದಕ್ಕೆ?

**ಕಾಮಲೇಖೆ**—ತಿಳಿದುದರಿಂದ ನಿನಗಾಗುವುದೇನು?

**ಮಕರಂದ**—ಸಂತೋಷ.

**ಕಾಮಲೇಖೆ**—ನೀನು ತಿಳಿಯಬೇಕಾದುದೂ ಇಲ್ಲ, ನಾನು ಹೇಳುವುದೂ ಇಲ್ಲ. (ಮುಂದಕ್ಕೆ ಹೋಗುತ್ತಿರುವಳು.)

**ಮಕರಂದ**—(ತಡೆದು) ಹೇಳದಿದ್ದರೆ ನಿನ್ನನ್ನು ನಾನು ಮುಂದಕ್ಕೆ ಬಿಡುವುದೂ ಇಲ್ಲ.

**ಕಾಮಲೇಖೆ**—ಆಗಲಿ, ನಮ್ಮ ಒಡೆತಿಯನ್ನೂ ನನ್ನನ್ನೂ ಅವಮಾನ ಮಾಡಿದ ನಿನಗೂ, ಆ ಜೋಗಿ ನಾರದನಿಗೂ ತಕ್ಕುದನ್ನು ಮಾಡಿಸುವೆನು.
(ಕೆನ್ನೆಗೆ ಹೊಡೆದು ಹೊರಟುಹೋಗುವಳು.)

**ಮಕರಂದ**—ಕೃಷ್ಣಾ! ಕೃಷ್ಣಾ! ಕೃಷ್ಣಾ!! (ಅಳುವನು.)

**ಕೃಷ್ಣ**—(ಕಾತರದಿಂದ ಬಂದು) ಏನಿದು ಮಕರಂದಾ? ಏತಕ್ಕೆ ಅಳುತ್ತಿರುವೆ? ನಿನಗೇನಾಯಿತು?

**ಮಕರಂದ**—(ಅಳುತ್ತ) ಆಗುವುದೇನು! ಪೂಜೆಯಾಯಿತು!

**ಕೃಷ್ಣ**—ಹಾಗೆಂದರೇನು? ವಿವರವಾಗಿ ಹೇಳೋ.

**ಮಕರಂದ**—ವಿವರವಿನ್ನೇನು! ಚೆನ್ನಾಗಿ ಒದೆಗಳಾಯಿತು.

**ಕೃಷ್ಣ**—ಏನು? ಒದೆಗಳೇ? ಚೆನ್ನಾಯಿತು! ಯಾರಿಂದ?

**ಮಕರಂದ**—ಹೆಂಗಸಿನಿಂದ!

**ಕೃಷ್ಣ**—(ನಕ್ಕು) ಮಕರಂದಾ! ಹೆಂಗಸಿನಿಂದ ಒದೆಗಳಾದುವೆಂದು ಹೇಳಿಕೊಳ್ಳುವ ನೀನೆಂತಹ ಗಂಡುಸೋ?

**ಮಕರಂದ**—ನೋಡಿದೆಯೋ! ಒದೆಗಳನ್ನು ತಿಂದುದಲ್ಲದೆ ನಿನ್ನಿಂದ ಈ ಅವಮಾನವು ಬೇರೆ! (ಬಿಕ್ಕುವನು.)

**ಕೃಷ್ಣ**—ಬೇಡ! ಅಳಬೇಡ! ಮಕರಂದಾ! ನಿನ್ನನ್ನು ಹೊಡೆದವರು ಯಾರು? ಅವರ ಹೆಸರನ್ನು ಹೇಳು! ಅವರಿಗೆ ತಕ್ಕುದನ್ನು ಮಾಡುವೆನು.

**ಮಕರಂದ**—ಕಾಮಲೇಖೆ.

**ಕೃಷ್ಣ**—ಯಾರು! ನಮ್ಮ ಸತ್ಯಭಾಮೆಯ ಸಖಿಯಾದ ಕಾಮಲೇಖೆಯೇ?

**ಮಕರಂದ**—ಆಹುದು! ಈ ನನ್ನ ದೊಣ್ಣೆಯ ಸಾಕ್ಷಿಯಾಗಿಯೂ ನಿಮ್ಮ ಸತ್ಯಭಾಮೆಯ ಪ್ರಿಯಸಖಿಯಾದ ಕಾಮಲೇಖೆಯು.

**ಕೃಷ್ಣ**—ಚೆನ್ನಾಯಿತು! ಅವಳು ಹೊಡೆಯುವುದಕ್ಕೆ ಕಾರಣ?

**ಮಕರಂದ**—ನೀನೇ.

**ಕೃಷ್ಣ**—ಏನು ಮಕರಂದಾ! ವಿಚಿತ್ರವಾಗಿ ಮಾತನಾಡುವೆ! ಕಾಮಲೇಖೆ ನಿನ್ನನ್ನು ಹೊಡೆದರೆ ಅದಕ್ಕೆ ನಾನು ಕಾರಣನೇ? ವಿಷಯವೇನು ವಿವರವಾಗಿ ಹೇಳು.

**ಮಕರಂದ**—ವಿವರವಿನ್ನೇನು! ನಾರದರು ಸತ್ಯಭಾಮೆಯನ್ನು ದೂಷಿಸಿದ ರಂತೆ, ಅದನ್ನು ಕೇಳಿ ನೀನೂ ನಾನೂ ಸಂತೋಷ ಪಟ್ಟೆವಂತೆ! ಇದ ರಿಂದ ನನ್ನನ್ನು ಪಟ ಪಟ ಪಟ ಬಾರಿಸಿ ಹೊರಟುಹೋದಳು. ನಾರ ದರು ಭಾಮೆಯನ್ನು ದೂಷಿಸಿದಾಗ ನೀನೇ ಅವರಿಗೆ ಪಟ ಪಟ ನಾಲ್ಕು ತೀಡಿದ್ದರೆ ನನಗೆ ಈ ಒದೆಗಳು ಬೀಳುತ್ತಿದ್ದವೋ?

**ಕೃಷ್ಣ**—ಒಳ್ಳೆಯ ಮಾತನ್ನು ಹೇಳಿದೆ! ಬಹಳ ಬುದ್ಧಿವಂತ!

**ಮಕರಂದ**—ನಾನು ಬುದ್ಧಿವಂತನಾಗಿದ್ದರೆ ಹೆಂಗಸರಿಂದ ಹಲ್ಲು ಮುರಿಯು ವಂತೆ ಒದೆಗಳನ್ನು ತಿನ್ನುತ್ತಿದ್ದೆನೇ! ಅದಿರಲಿ, ನನಗೂ, ನಿನಗೂ, ನಾರದ ರಿಗೂ ಏನೋ ತಕ್ಕುದನ್ನು ಮಾಡಿಸುವಳಂತೆ, ಶಪಥ ಮಾಡಿಕೊಂಡು ಹೋಗಿರುವಳು. ಇನ್ನು ಮುಂದೆ ನಿನ್ನ ಗತಿಯೇನಾಗುವುದೋ, ನನ್ನ

ಗತಿಯೇನಾಗುವುದೋ, ನಾರದರ ಗತಿ ಏನಾಗುವುದೋ ಏನು ಕಥೆಯೋ! (ಅಳುವನು.)

**ಕೃಷ್ಣ**—(ನಕ್ಕು) ಹುಚ್ಚನಂತೆ ಅಳಬೇಡವೋ. ನಾನೆಲ್ಲವನ್ನೂ ಕ್ರಮ ಪಡಿಸುವೆನು.

**ಮಕರಂದ**—ನನಗೆ ಬಿದ್ದಂತೆ ನಿನಗೂ ಒದೆಗಳು ಬಿದ್ದಿದ್ದರೆ ನೀನು ಬುದ್ಧಿವಂತನಂತೆ ಅಳುತ್ತಿದ್ದೆಯೇನೋ ಪಾಪ! ಆಗಲಿ ಏನು ಮಾಡುವೆಯೋ ಮಾಡು. ನನಗೆ ಹಸಿವಾಗುತ್ತಿರುವುದು. ನಾನು ಮನೆಗೆ ಹೋಗಿ ಊಟಮಾಡುವೆನು.

**ಕೃಷ್ಣ**—ಹಾಗೆಯೇ ಮಾಡು ಹೋಗು. ಮತ್ತೆ ಯಾರಾದರೂ ಚೇಟಿಯರಲ್ಲಿ ಹುಚ್ಚುಹುಚ್ಚಾಗಿ ಹರಟಿ ಮತ್ತೆ ಒದೆಗಳನ್ನು ತಿಂದೀಯೆ ಎಚ್ಚರಿಕೆ!

**ಮಕರಂದ**—ಇಲ್ಲ. (ಹೋಗುವನು.)

**ಕೃಷ್ಣ**—ನಾರದರು ಪಾರಿಜಾತ ಪುಷ್ಪವನ್ನು ತಂದುಕೊಟ್ಟು ಒಳ್ಳೆಯ ರಗಳೆಯನ್ನು ಹಚ್ಚಿದರು. ನೆರೆದಿದ್ದ ಆ ಸ್ತ್ರೀಯರ ಮಧ್ಯದಲ್ಲಿ ರುಕ್ಮಿಣಿಯನ್ನು ಬಹಳವಾಗಿ ಹೊಗಳಿ ಸತ್ಯಭಾಮೆಯನ್ನು ಹೀಯಾಳಿಸಿದರು. ಇದನ್ನು ಕೇಳಿ ಕಾಮಲೇಖೆಯು ಸಿಡಗುಟ್ಟುತ್ತಾ ಹೊರಟುಹೋದದನ್ನು ನಾನು ನೋಡಿದೆನು. ಈಗ ಮಕರಂದನಮಾತಿನಿಂದ ಅವಳು ಸತ್ಯಭಾಮೆಗೆ ಈ ವಿಷಯವನ್ನು ತಿಳಿಸಿ ಅವಳ ಮನಸ್ಸನ್ನು ಕಲಕಿ ಗದ್ದಲವನ್ನೇ ಉಂಟು ಮಾಡುವಳೆಂದು ವ್ಯಕ್ತವಾಯಿತು. ಆತ್ಮಪ್ರಶಂಸೆಯೂ, ರುಕ್ಮಿಣಿಯಲ್ಲಿ ಅಸೂಯೆಯೂ ಉಳ್ಳ ಭಾಮೆಯು, ಇದನ್ನು ಕೇಳಿದೊಡನೆಯೇ ಕೋಪತಾಪಗಳಿಂದ ಹುಚ್ಚಳಾಗುವಳು. ಆಗ ಅವಳನ್ನು ಸಂತೈಸುವುದು ಬಹು ಕಷ್ಟವಾಗುವುದು. ಲೋಕದಲ್ಲಿ ಒಬ್ಬ ಪತ್ನಿಯುಳ್ಳವನಿಗೆ ಗೃಹಕೃತ್ಯದಲ್ಲಿ ಎಷ್ಟೋ ಕಷ್ಟಗಳಿರುವುವು. ಇನ್ನು ಅನೇಕಮಂದಿ ಪತ್ನಿಯರುಳ್ಳ ನನಗಾದರೋ ಈ ರಮಣಿಯರಲ್ಲಿ ದ್ವೇಷಾಸೂಯೆಗಳು ಬಾರದಂತೆ ನೋಡಿಕೊಳ್ಳುವುದೇ ಮುಖ್ಯಕಾರ್ಯವಾಗಿರುವುದು. ಆದುದರಿಂದ ಈಗಲೇ

ಸತ್ಯಭಾಮೆಯ ಬಳಿಗೆ ಹೋಗಿ ಅವಳು ಒಂದು ವೇಳೆ ಕಾಮಲೇಖೆಯ ಮಾತಿನಿಂದ ಕುಪಿತಳಾಗಿದ್ದರೆ ಅವಳನ್ನು ಸಮಾಧಾನಪಡಿಸುವೆನು.

**ನಾರದ**—(ಪ್ರವೇಶಿಸಿ) ೧೭ ಕೃಷ್ಣಾ ; ಬಲರಾಮನ ಬಳಿಗೆ ಹೋಗಿದ್ದೆನು. ಅಲ್ಲಿನ ವಿಚಿತ್ರಗಳನ್ನು ನಿನಗೆ ತಿಳಿಸಿ ಮುಂದೆ ಪ್ರಯಾಣ ಮಾಡೋಣ ವೆಂದು ಹೀಗೆ ಬಂದೆನು.

**ಕೃಷ್ಣ**—(ಆತ್ಮ) ಅದೋ ! ಮತ್ತೆ ಏನನ್ನೋ ತಂದಿರುವರು ! (ಪ್ರಕಾಶ) ಪೂಜ್ಯರೇ ! ಬಹಳ ಸಂತೋಷ ! ವಿಚಾರವೇನು ?

**ನಾರದ**—ಏನೂ ! ಇಲ್ಲ ! ಏನೂ ಇಲ್ಲ !!

**ಕೃಷ್ಣ**—ಏಕೆ ಮರೆಮಾಚುವಿರಿ? ಅಂತಹ ಗೋಪ್ಯವಿಚಾರವೇನು ?

**ನಾರದ**—ಕೃಷ್ಣಾ ! "ಮಾಡಿದವರ ಪಾಪವು ಆಡಿದವರ ಬಾಯಲ್ಲಿ." ಏತಕ್ಕೆ ಹೇಳಬೇಕು ! ಏನೂಬೇಡ. ಇದಲ್ಲದೆ, ನೀವು ರಾಜರು. ನೀತಿ ಧರ್ಮಗಳನ್ನೂ, ಆಚಾರವ್ಯವಹಾರಗಳನ್ನೂ, ವರ್ಣಾಶ್ರಮ ವಿಚಾರ ಗಳನ್ನೂ ಪರಿಪಾಲಿಸತಕ್ಕ ಧರ್ಮಸ್ವರೂಪರು. ಹೀಗಿರುವಲ್ಲಿ ನೀವು ನಡೆಯುವ ನಡೆತೆಗಳೆಲ್ಲವೂ ಉತ್ತಮವೆಂದೇ ಭಾವಿಸಬೇಕು ; ಅದರಿಂದ ನನಗೇತಕ್ಕೆ ಆ ವಿಚಾರ ! ಏನೂಬೇಡ.

**ಕೃಷ್ಣ**—(ಆತ್ಮ) ಏನೋ ವಿಚಿತ್ರವಾಗಿ ನುಡಿಯುತ್ತಿರುವರು! (ಪ್ರ) ಪೂಜ್ಯರೇ ! ನಾವು ಎಂತಹ ದೊಡ್ಡವರಾದರೂ ನಮ್ಮೆಲ್ಲರಿಗೂ ಬುದ್ಧಿ ಯನ್ನು ಹೇಳಿ ಆಶೀರ್ವದಿಸತಕ್ಕವರು ತಾವು. ಆದುದರಿಂದ ತಾವು ಸಂದೇಹ ಪಡದೆ ವಿಚಾರವನ್ನು ವಿವರವಾಗಿ ದಯವಿಟ್ಟು ತಿಳಿಸಬೇಕು.

**ನಾರದ**—ಒಳ್ಳೆಯ ನಿರ್ಬಂಧವಾಯಿತೇ ! ಏನು ಮಾಡಲಿ ! ನಿನ್ನ ನಿರ್ಬಂಧ ಕ್ಕಾಗಿ ನಿನ್ನೊಡನೆ ಹೇಳಬೇಕಾಗಿದೆ. ಆದರೆ ನಾನೀವಿಚಾರವನ್ನು ಹೇಳಿದೆನೆಂದು ನೀನು ಬಲರಾಮನೊಡನೆ ಹೇಳುವುದಿಲ್ಲವಷ್ಟೆ ?

**ಕೃಷ್ಣ**—ಇಲ್ಲ, ಹೇಳುವುದಿಲ್ಲ.

**ನಾರದ**—ಆದರೆ ಹೇಳುವೆನು ಕೇಳು. ನಿಮ್ಮ ಬಲರಾಮನು ಮಧುದೇವತೆಯನ್ನು ಮನೆಗೆ ಬರಮಾಡಿ, ತಾನು ಮಿತಿಮೀರಿ ಮಧುವನ್ನು ಕುಡಿದು, ಕುಡಿಯಬೇಡವೆಂದು ಹೇಳಿದ ರೇವತಿಯನ್ನು ಕುಡಿಯುವಂತೆ ಬಲಾತ್ಕರಿಸಿ, ಗದ್ದಲವನ್ನು ಹಚ್ಚಿದನು. ಆಕೆ ತಿರಸ್ಕರಿಸಿ ಮದ್ಯವನ್ನು ದೂಷಿಸಿದುದರಿಂದ, ಸವತಿಯರಿಬ್ಬರಿಗೂ ಜಗಳ ಹತ್ತಿತು. ಆ ಸಮಯಕ್ಕೆ ಆಕಸ್ಮಿಕವಾಗಿ ನಾನು ಹೋಗಿ ನೋಡುವಲ್ಲಿ ಬಲರಾಮನ ಸ್ಥಿತಿಯೇ ವಿಪರೀತವಾಗಿತ್ತು. ಮಿತಿಮೀರಿದ ಮದ್ಯಪಾನದಿಂದ, ಮಾತನ್ನಾಡಲು ಸಹ ಸಾಧ್ಯವಿಲ್ಲದೆ ಹುಚ್ಚು ಹುಚ್ಚಾಗಿ ನಗುತ್ತಾ, ತೊದಲುಮಾತುಗಳನ್ನಾಡಿ ಮಧುಕಲಶವನ್ನು ನನಗೂ ಕೊಡಲು ಬಂದನು.

**ಕೃಷ್ಣ**—(ಆಶ್ಚರ್ಯದಿಂದ) ಏನು ! ಏನು ! ತಮಗೂ ಕೊಡಲು ಬಂದನೇ ?

**ನಾರದ**—ಅಹುದಯ್ಯಾ ! ನಿಮ್ಮ ಮನೆಗೆ ಬಂದ ಕಾರಣ ನಾನು ಇನ್ನು ಮಧುಸೇವನೆಯನ್ನು ಬೇರೆ ಮಾಡಬೇಕಾಗಿತ್ತು. ಈ ನಡೆತೆಯು ನಿನಗೂ ಹಿತಕರವಾಗಿಯೇ ಇರಬಹುದು !

**ಕೃಷ್ಣ**—ಶಿವ ಶಿವಾ ! ಪೂಜ್ಯರೇ ! ತಾವು ಹಾಗೆ ಭಾಷಿಸಬಾರದು. ಗೋಮಂತಪರ್ವತದಲ್ಲಿ ಮಧುದೇವತೆಯು ಆತನನ್ನು ವರಿಸಿದುದರಿಂದ ಆತನಲ್ಲಿ ಈ ದುರಭ್ಯಾಸವುಂಟಾಗಿರುವುದು. ಅಣ್ಣನಾದ ಆತನಿಗೆ ನಾನು ವಿವೇಕವನ್ನು ಹೇಳುವುದು ಲೋಕವಿರೋಧವೆಂದು ಸುಮ್ಮನಿದ್ದೆನು. ಈ ದಿನ ತಮ್ಮಿಂದ ಈ ವಿಚಾರವನ್ನು ಕೇಳಿ ಬಹಳ ವ್ಯಸನವಾಗುತ್ತಿರುವುದು. ತಾವು ದಯವಿಟ್ಟು ನಮ್ಮ ಅಣ್ಣನನ್ನು ಮನ್ನಿಸಬೇಕು. ನಾನು ಏನಾದರೂ ಯುಕ್ತಿಯನ್ನು ಕಲ್ಪಿಸಿ ಆತನಿಗೆ ತಿಳಿವಳಿಕೆಯನ್ನುಂಟುಮಾಡುವೆನು.

**ನಾರದ**—ಆಗಲಿ. ಹಾಗೆಯೇ ಮಾಡು. ಹೇಗಾದರೂ ಬಲರಾಮನಿಗೆ ಬುದ್ಧಿಗಲಿಸಲೇಬೇಕು.

**ಕೃಷ್ಣ**—ಆಗಲಿ. ಹಾಗೆಯೇ ಮಾಡುವೆನು. (ನಾರದನು ಹೋಗುವನು.)

**ಕೃಷ್ಣ**—(ಆತ್ಮ) ಆಹಾ! ಸಂಸಾರದಲ್ಲಿ ಎಂತೆಂತಹ ಸಂಧಿಗಳೊದಗುವುವು! ಉತ್ಸವಕಾಲದಲ್ಲಿ, ಈ ಮುನಿಯು ಸತ್ಯಭಾಮೆಯನ್ನು ದೂರಿ ಇಲ್ಲದ ರಗಳೆಯನ್ನು ಹಚ್ಚಿರುವನು. ಅಣ್ಣನು ಮದ್ಯಪಾಯಿಯಾಗಿರುವನು. ಮಕರಂದನು, ಪಾಪ! ಆ ಚೇಟಿಯರಿಂದ ಒದೆಗಳನ್ನು ತಿಂದು ಅಳುತ್ತಿರುವನು. ನಾನು ಯಾರಿಗೆ ಬುದ್ಧಿ ಹೇಳಲಿ! (ಆಲೋಚಿಸಿ) ಇರಲಿ! ಈಗ ಮೊದಲು ನಾನು ಭಾಮೆಯ ಅಂತಃಪುರಕ್ಕೆ ಹೋಗಿ ಆಕೆಯನ್ನು ಸಮಾಧಾನಪಡಿಸುವೆನು. ಅನಂತರ ಅಣ್ಣನಿಗೆ ಮದ್ಯಪಾನದ ಅನರ್ಥಗಳನ್ನು ಉಪಾಯಾಂತರದಿಂದ ಪ್ರತ್ಯಕ್ಷವಾಗಿ ತೋರಿಸಿ, ಆತನಿಗೆ ಆ ಮದ್ಯಪಾನದ ದುರಭ್ಯಾಸವನ್ನು ತಪ್ಪಿಸುವೆನು. (ಹೋಗುವನು.)

## ಸ್ಥಾನ ೬—ಸತ್ಯಭಾಮೆಯ ಅಂತಃಪುರ.

**ಸತ್ಯಭಾಮೆ**—೧೭ ಸಖೀ ವಿಲಾಸಿನೀ! ಪುಣ್ಯಕವ್ರತವೆಂಬ ನೆಪದಿಂದ ರುಕ್ಮಿಣಿಯು ಆರ್ಯಪುತ್ರನನ್ನು ನಮ್ಮ ಮನೆಯ ಕಡೆಗೇ ಬಾರದಂತೆ ನಿಲ್ಲಿಸಿಕೊಂಡು ಬಿಟ್ಟಿರುವಳು. ನಾನಾತನ ಮುಖವನ್ನು ನಿನ್ನೆಯಿಂದಲೂ ನೋಡಲೇ ಇಲ್ಲ. ಸೌಂದರ್ಯದಲ್ಲಿಯೂ, ಸೌಭಾಗ್ಯದಲ್ಲಿಯೂ, ಸರಸ ವಿನೋದದಲ್ಲಿಯೂ, ನನ್ನಂಥವಳು ತನ್ನ ಪತ್ನಿಯರಲ್ಲಿ ಮತ್ತೆಯಾರೂ ಇಲ್ಲವೆಂದು ಆ ನನ್ನ ಪ್ರಿಯನು ಅನೇಕಾವೃತ್ತಿ ಹೇಳಿದ್ದನು. ಹೀಗಿರುವಲ್ಲಿ, ನಿನ್ನೆಯಿಂದಲೂ, ನನ್ನನ್ನು ನೋಡಲು ಆತನು ಬರಲೇ ಇಲ್ಲವಲ್ಲಾ!

**ವಿಲಾಸಿನಿ**—ಸಖೀ! ನೀನು ಹೇಳಿದಂತೆ ಶ್ರೀಕೃಷ್ಣನನ್ನು ಪುಣ್ಯಕವ್ರತವೆಂಬ ನೆಪದಿಂದ ಆ ರುಕ್ಮಿಣೀದೇವಿಯೇ ತಡೆದಿರಬೇಕು.

**ಸತ್ಯಭಾಮೆ**— ಇರಬಹುದು! ಅವಳ ಬೇಳುವೆಮಾತುಗಳಿಗೆ ಬೆರಗಾಗಿ ಹುಚ್ಚು ಹಿಡಿದು ಅಲ್ಲಿಯೇ ನಿಂತುಬಿಟ್ಟನೋ ಏನೋ ಕಾಣೆ. ಪುಣ್ಯಕವ್ರತಕ್ಕೆ ನನ್ನ ಪ್ರತಿನಿಧಿಯಾಗಿ ನಾನು ಕಳುಹಿಸಿದ್ದ ಕಾಮಲೇಖೆಯಾದರೂ ಬಂದರೆ ಅಲ್ಲಿನ ವಿಷಯಗಳು ತಿಳಿಯುವುವೆಂದರೆ ಅವಳಿನ್ನೂ ಬರಲಿಲ್ಲ!

**ವಿಲಾಸಿನಿ**—(ಮುಂದೆ ನೋಡಿ) ಅದೋ! ಕಾಮಲೇಖೆ ಬರುತ್ತಿರುವಳು. ನಾನು ಹೋಗಿ ಅಲಂಕಾರವಸ್ತುಗಳನ್ನು ತರುವೆನು. (ಹೋಗುವಳು).

**ಕಾಮಲೇಖೆ**—(ಪ್ರವೇಶಿಸಿ ಖಿನ್ನಳಾಗಿ ದೂರದಲ್ಲಿ ನಿಲ್ಲುವಳು.)

**ಸತ್ಯಭಾಮೆ**—ಏನು ಕಾಮಲೇಖೇ! ರುಕ್ಮಿಣಿಯವ್ರತವೆಲ್ಲವೂ ಪೂರೈಸಿತೋ?

**ಕಾಮಲೇಖೆ**—ಪೂರೈಸಿರಬಹುದು. ಅದನ್ನು ಯಾರು ಬಲ್ಲರು.

**ಸತ್ಯಭಾಮೆ**—ಅದೇನೇ ಅಷ್ಟು ಉದಾಸೀನವಾಗಿ ಮಾತನಾಡುವೆ? ನೀನ ಲ್ಲಿಗೆ ಹೋಗಲಿಲ್ಲವೇನು?

**ಕಾಮಲೇಖೆ**—ಹೋಗಿದ್ದುದೂ ಆಯಿತು. ಅರ್ಧದಲ್ಲಿಯೇ ಹೊರಟು ಬಂದುದೂ ಆಯಿತು.

**ಸತ್ಯಭಾಮೆ**—ಅದೇತಕ್ಕೆ? ಅವರೇನಾದರೂ ನಿನಗವಮಾನವನ್ನು ಮಾಡಿ ದರೇನು?

**ಕಾಮಲೇಖೆ**—ನನಗವಮಾನವಾಗಿದ್ದರೆ ಅದು ಯಾವ ಗಣನೆ! ನಿಮ್ಮಂತಹ ಅರಸಿಯರಿಗೇ ಅವಮಾನವಾಗುತ್ತಿರುವಲ್ಲಿ ನಿನ್ನ ಸಖಿಯಾದ ನನಗೇನು ಅವಮಾನ?

**ಸತ್ಯಭಾಮೆ**—ಅದೇನೇ ಕಾಮಲೇಖೇ! ವಿವರಿಸಿ ಹೇಳ್. ನನಗವಮಾನ ವೆಂದರೇನೇ?

**ಕಾಮಲೇಖೆ**—ನಿನಗವಮಾನವೆಂದರೆ; ನಿನ್ನ ಸವತಿಯರೆದುರಿಗೂ ನಿನ್ನ ಮತ್ತು ನಿನ್ನ ಸವತಿಯರ ದಾಸದಾಸಿಯರೆದುರಿಗೂ ನಿನ್ನ ಗಂಡನೇ ನಿನ್ನನ್ನು ಗಣನೆಗೆ ತಾರದೆ ನಿನ್ನ ಸವತಿಯನ್ನು ಬಹುಮಾನಿಸಿದುದಲ್ಲದೆ ಒಬ್ಬ ಒಡಜೋಗಿಯೂ ಸಹ ನಿನ್ನ ವಿಷಯದಲ್ಲಿ ಕೀಳಾಗಿ ಮಾತನಾಡಿದ ನಲ್ಲಾ! ಅದೇ ನಿನಗಮಾನವೆಂಬುದು; ತಿಳಿಯಿತೋ?

**ಸತ್ಯಭಾಮೆ**—ಏನು! ಏನು! ಆರ್ಯಪುತ್ರನು ನನ್ನನ್ನವಮಾನಿಸಿದನೇ? ಬಡಜೋಗಿಯು ನನ್ನ ವಿಷಯದಲ್ಲಿ ಕೀಳಾಗಿ ನುಡಿದನೇ? ಕಾಮ ಲೇಖೇ, ಇನ್ನು ಗೂಢವಾಗಿ ಮಾತನಾಡುವುದನ್ನು ಬಿಡು, ವಿಷಯ ವನ್ನು ವಿವರಿಸಿ ಹೇಳು.

**ಕಾಮಲೇಖಿ**—ದೇವೀ ! ಹೇಳುವುದಿನ್ನೇನು. ನಾರದನು ದೇವಲೋಕ ದಿಂದ ಅಪೂರ್ವವಾದ ಒಂದು ಪಾರಿಜಾತ ಪುಷ್ಪವನ್ನು ತಂದು ಕೃಷ್ಣ ನಿಗೆ ಕೊಡಲು, ಆತನು ಅದನ್ನು ಕೂಡಲೇ ರುಕ್ಮಿಣಿಗೆ ತಾನೇ ಮುಡಿಸಿ ದನು. ನಾರದನು ಅದನ್ನು ನೋಡಿ "ರುಕ್ಮಿಣಿಯ ಅಂಗುಷ್ಠದಲ್ಲಿನ ಸೌಭಾಗ್ಯವು ಸತ್ಯಭಾಮೆಯ ಹಣೆಯಲ್ಲಿಲ್ಲ. ಪ್ರದ್ಯುಮ್ನಕುಮಾರನನ್ನು ಹೆತ್ತ ರುಕ್ಮಿಣಿಯಲ್ಲದೆ, ಆ ಸತ್ಯಭಾಮೆಯು ಪಾರಿಜಾತ ಪುಷ್ಪವನ್ನು ಧರಿಸಲರ್ಹಳೇ ?" ಎಂದು ಬಹಳವಾಗಿ ನಿನ್ನನ್ನು ಹೀಯಾಳಿಸಿ ಮಾತ ನಾಡಿದನು. ಆಗ ರುಕ್ಮಿಣಿಯ ಸಖಿಯರೆಲ್ಲರೂ ಅವರ ಎದುರಲ್ಲಿಯೇ ಸಂತೋಷದಿಂದ ನಕ್ಕು ನಲಿದಾಡಿದರು. ಇಷ್ಟಲ್ಲದೆ, ಆ ಪಾರಿಜಾತದ ಅಂದವೂ ಪರಿಮಳವೂ ಅಷ್ಟಿಷ್ಟೆಂದು ಹೇಳಲಾರೆನು ; ಮತ್ತು ಅದನ್ನು ಧರಿಸಿಕೊಂಡರೆ, ನೆನೆಸಿದ ಇಷ್ಟಾರ್ಥವು ಆ ಕ್ಷಣವೇ ಸಿದ್ಧಿಸುವುದಂತೆ ! ಇಂತಹ ಪುಷ್ಪವು ಪರಮ ಸೌಂದರ್ಯಶಾಲಿನಿಯೂ, ರಸಿಕಾಗ್ರಣಿಯೂ ಆದ **ನಿನಗಿಲ್ಲದೆ,** ಆ ರುಕ್ಮಿಣಿಯ ಕೈಸೇರಿದುದು ಮಾತ್ರವಲ್ಲದೆ, ನಿನಗೆ ಅಷ್ಟು ಮಂದಿಯ ಎದುರಿನಲ್ಲಿ ಆದ ಅವಮಾನದಿಂದ ನನಗೆ ಬಹಳ ವಿಷಾದವಾಯಿತು. ಆದುದರಿಂದ ಆ ಭಾಷಣಗಳನ್ನು ಕೇಳಲಾರದೆ ನಾನು, ಪೂಜೆಯು ಪೂರಯಿಸಿದ್ದರೂ ತಾಂಬೂಲವನ್ನು ತೆಗೆದುಕೊಳ್ಳದೆ ಬಂದುಬಿಟ್ಟೆನು.

**ಸತ್ಯಭಾಮೆ**—ಏನು ! ಆರ್ಯಪುತ್ರನೂ ನನ್ನನ್ನು ನಿರ್ಲಕ್ಷ್ಯಮಾಡಿದನೇ! ಆ ಬಡ ಜೋಗಿಯೂ ನನ್ನನ್ನು ಹೀಯಾಳಿಸಿದನೇ? ಆಹಾ ! ರುಕ್ಮಿ ಣಿಯು ನಿನ್ನೆಯಿಂದಲೂ ಆರ್ಯಪುತ್ರನನ್ನು ಮರುಳುಮಾಡಿ ನನ್ನ ಮನೆಗೆ ಬರಲವಕಾಶಕೊಡದೆ ಇದ್ದು, ತನ್ನ ಇಷ್ಟಾರ್ಥವನ್ನು ನೆರವೇರಿಸಿ ಕೊಂಡಳೇ ! ಅಯ್ಯೋ ! ನಾನು ಆ ಮುಕುಂದನ ಗೋಚರಕ್ಕಾದರೂ ಬಾರದೇ ಹೋದೆನೇ ? ೧೮ ಇನ್ನು ನನ್ನ ಜನ್ಮವೇಕೆ ! (ಶೋಕಿಸುವಳು.)

**ವಿಲಾಸಿನಿ**—(ಗಂಧಪುಷ್ಪಾದಿಗಳನ್ನು ಹಿಡಿದು ಪ್ರವೇಶಿಸಿ) ದೇವೀ ! ಇದೋ ಗಂಧ ಪುಷ್ಪಗಳನ್ನು ತಂದಿರುವೆನು.

**ಸತ್ಯಭಾಮೆ**—ಎಲೌ ವಿಲಾಸಿನೀ, ಆರ್ಯಪುತ್ರನು ನನ್ನಲ್ಲಿ ಉದಾಸೀನನಾದಮೇಲೆ, ನನಗೆ ಈ ಗಂಧ ಪುಷ್ಪಾದಿಗಳೇತಕ್ಕೆ ? ಅಲಂಕಾರಗಳೇತಕ್ಕೆ ? ಸಾಕು ಹೋಗು. (ಗಂಧದ ಬಟ್ಟಲನ್ನು ತೆಗೆದು ನೆಲಕ್ಕೆ ಕುಕ್ಕುವಳು.) ಎಲೌ ಕಾಮಲೇಖೇ ! ನನಗೆ ತಲೆ ನೋಯುತ್ತಿರುವುದು ; ನಾನು ಈ ಮನೋವ್ಯಥೆಯನ್ನು ಸಹಿಸಲಾರೆನು. ನೀನು ಹೊರಟುಹೋಗು ; ವಿಲಾಸಿನೀ, ನೀನು ಬಾಗಿಲಲ್ಲಿರು ; ಯಾರನ್ನೂ ಒಳಗೆ ಬಿಡಬೇಡ. (ತಲೆಗೆ ಬಟ್ಟೆಯನ್ನು ಕಟ್ಟಿಕೊಂಡು ಮಂಚದಮೇಲೆ ಮುಖವನ್ನು ಮುಚ್ಚಿಕೊಂಡು ಬೀಳುವಳು.)

**ಕೃಷ್ಣ**—(ಪ್ರವೇಶಿಸುವನು.)

**ವಿಲಾಸಿನಿ**—(ತಡೆದು) ದೇವಾ ! ದಯವಿಟ್ಟು ನಿಲ್ಲಬೇಕು.

**ಕೃಷ್ಣ**—ಏನಿದು ವಿಲಾಸಿನೀ ? ಏತಕ್ಕೆ ನಿಲ್ಲಬೇಕೆನ್ನುವೆ ?

**ವಿಲಾಸಿನಿ**—ಯಾರನ್ನೂ ಒಳಗೆ ಬಿಡಕೂಡದೆಂದು ದೇವಿಯವರ ಅಪ್ಪಣೆಯಾಗಿರುವುದು.

**ಕೃಷ್ಣ**—ಏನು ? ಏನು ? ದೇವಿಯು ನನ್ನನ್ನೂ ಬಿಡಬೇಡವೆಂದು ಅಪ್ಪಣೆ ಮಾಡಿರುವಳೇ ?

**ವಿಲಾಸಿನಿ**—ಯಾರನ್ನೂ ಬಿಡಕೂಡದೆಂದು ಅಪ್ಪಣೆಮಾಡಿರುವರು.

**ಕೃಷ್ಣ**—(ಆತ್ಮ) ಕಾಮಲೇಖೆಯು ಆಗಲೇ ಬಂದು ಗಲಭೆಯನ್ನು ಹಚ್ಚಿರುವಳು. ಆಗಲಿ ; ಏನೇನು ವಿಚಿತ್ರಗಳು ನಡೆಯುವವೋ ನೋಡುವ. (ಪ್ರಕಾಶಂ) ಎಲೌ ವಿಲಾಸಿನೀ ! ನೀನು ನನ್ನನ್ನು ಒಳಗೆ ಬಿಡು. ನಿಮ್ಮ ದೇವಿಯು ಒಂದುವೇಳೆ ನಿನಗೆ ಶಿಕ್ಷೆಮಾಡಲು ಬಂದರೆ, ಆ ಶಿಕ್ಷೆಯನ್ನು ನಾನು ಅನುಭವಿಸುವೆನು ; ದಾರಿಯನ್ನು ಬಿಡು.

**ವಿಲಾಸಿನಿ**—ದೇವಾ ! ಹೆಚ್ಚಾಗಿ ಬಿನ್ನವಿಸಲಾರೆನು. ತಮ್ಮ ಚಿತ್ತ. (ದಾರಿಯನ್ನು ಬಿಡುವಳು.)

**ಕೃಷ್ಣ**—(ಮೆಲ್ಲನೆ ಒಳಗೆ ಪ್ರವೇಶಿಸುತ್ತಾ ವಿಲಾಸಿನಿಗೆ ಕೂಗಬೇಡವೆಂದು ಸನ್ನೆಮಾಡಿ, ಸತ್ಯಭಾಮೆಯ ಬಳಿಗೆ ಬಂದು ಬೀಸಣಿಗೆಯನ್ನು ತೆಗೆದುಕೊಂಡು ಬೀಸುತ್ತಿರುವನು.)

**ಸತ್ಯಭಾಮೆ**—(ಎದ್ದು) ಏನಿದು! ಅಪೂರ್ವ ಸುಗಂಧವು! (ಸುತ್ತಲೂ ನೋಡುವಾಗ ಕೃಷ್ಣನು ಭಯಗೊಂಡವನಂತೆ ನಟಿಸುತ್ತಿರುವುದನ್ನು ಕಂಡು ಕೋಪ ದಿಂದ ನೋಡಿ ಕಣ್ಣೀರನ್ನು ಸುರಿಸುವಳು)

**ಕೃಷ್ಣ**—ಕಂದ|| ವ್ಯಾಕುಲಮೇಂ ಕೋಪವಿದೇಂ |

೧೯ ಕೋಕಿಲಕಲವಾಣಿ ಮಧುಪಮಂಜುಳ ವೇಣೀ ||

ರಾಕೇಂದುವದನೆ ದಿವ್ಯಕ |

ಳಾಕಲಿತ ವಿಲಾಸಹಾಸದಿಂ ನುಡಿ ರಮಣೀ || ೭ ||

(ಕೈಹಿಡಿಯುವನು. ಕೈಕಿತ್ತುಹಾಕಿ ಭಾಮೆಯು ದೂರದಲ್ಲಿ ತಲೆಬಾಗಿ ನಿಲ್ಲುವಳು.)

ಸತ್ಯಭಾಮೇ! ಏನಿದು! ಲೋಕಾತಿಶಯ ಸೌಂದರ್ಯಶಾಲಿನಿಯೂ, ರಸಿಕರಮಣೀಮಣಿಯೂ ಆದ ನಿನ್ನನ್ನು ನೋಡಿ ಆನಂದಪಡಲು ಬಂದ ನನ್ನಲ್ಲಿ ಇಷ್ಟು ಕೋಪವೇ? ಈ ಚಿಂತೆಗೆ ಕಾರಣವೇನು?

**ಸತ್ಯಭಾಮೆ**—ತಮ್ಮ ದೋಷಗಳನ್ನು ಮುಚ್ಚಿಕೊಳ್ಳಲು ಇಂತಹ ಬೂಟಾಟ ಕದ ಹೊಗಳಿಕೆಯಿಂದ ಸ್ತ್ರೀಯರನ್ನು ಬೆರಗುಮಾಡಿ, ಸಮಯದಲ್ಲಿ ಅವಮಾನಮಾಡುವ ಮಹಾನುಭಾವರಾದ ತಮ್ಮ ಅನುಗ್ರಹವೇ ನನ್ನ ಚಿಂತೆಗೆ ಕಾರಣವಲ್ಲದೆ ಮತ್ತೇನೂ ಇಲ್ಲ.

**ಕೃಷ್ಣ**—ಭಾಮೇ! ಇದೇನು ವಿಚಿತ್ರವಾಗಿ ಮಾತನಾಡುವೆಯಲ್ಲಾ?

**ಸತ್ಯಭಾಮೆ**—ನಿಜ. ನಿಜ! ನಾನಾಡುವ ಮಾತುಗಳೇ ವಿಚಿತ್ರವು! ಕೈ ಯಿಂದ ಮಾಡುವುದೊಂದು, ಬಾಯಿಂದಾಡುವುದೊಂದು: ಈ ರೀತಿ ಯಾದ ನಡೆವಳಿಕೆಯಿಂದ, ನಂಬಿದವರಲ್ಲಿ ನಿಷ್ಕಪಟಿಯಂತೆ ತೋರ್ಪಡಿಸಿ ಕೊಳ್ಳಲು ಯತ್ನಿಸಿ, ಏನೂ ತಿಳಿಯದಂತೆ ನಟಿಸುವರ ಮಾತೇ ವಿಚಿತ್ರ ವಲ್ಲದ್ದು! ಸಾಕು, ಸಾಕು. ನನ್ನ ಮನಸ್ಸು ಬಹಳವಾಗಿ ನೊಂದಿರು ವುದು. ನನ್ನನ್ನು ಕೆಣಕಬೇಡಿ.

**ಕೃಷ್ಣ**—ಭಾಮೇ! ಸಾಕು! ಏತಕ್ಕೆ ನಿನ್ನ ಮನಸ್ಸು ನೊಂದಿತು? ನಾನು

ನಿನ್ನನ್ನು ನೋಯಿಸಲಿಲ್ಲವಲ್ಲಾ ! ನಾನು ಯಾರನ್ನೂ ನೋಯಿಸತಕ್ಕವನೂ ಅಲ್ಲವಲ್ಲಾ !

**ಸತ್ಯಭಾಮೆ**—ಪಾಪ ! ಪಾಪ ! ತಾವು ಯಾರನ್ನೂ ನೋಯಿಸತಕ್ಕವರಲ್ಲ. ನಿಜ ! ಅದನ್ನು ಕಂಸನೂ, ಕಾಳೀಯನೂ, ಶಕಟನೂ, ಧೇನುಕನೂ, ಇನ್ನೂ ಅನೇಕರು ಮಾತ್ರ ಬಲ್ಲರು. ಅಷ್ಟೆ !

**ಕೃಷ್ಣ**—ರಮಣೀ ! ಅವರು ದುಷ್ಟರಾದುದರಿಂದ ಅವರನ್ನು ಶಿಕ್ಷಿಸಬೇಕಾಯಿತು. ನಿನ್ನಂಥ ಅಬಲೆಯನ್ನು ನಾನು ನೋಯಿಸುವೆನೇ ?

**ಸತ್ಯಭಾಮೆ**—ಇಲ್ಲ ! ಇಲ್ಲ ! ತಪ್ಪಾಯಿತು. ಪಾಪ ! ಆ ಹಾಲು ಕೊಟ್ಟ ಪೂತನಿಯ ವಿಷಯದಲ್ಲಿ ತಾವು ತೋರಿಸಿದ ಕನಿಕರವು ಈಗತಾನೇ ಸ್ಮರಣೆಗೆ ಬಂತು. ತಾವು ಅಬಲೆಯರನ್ನು ನೋಯಿಸತಕ್ಕವರೇ ಅಲ್ಲ !

**ಕೃಷ್ಣ**—ಸುಂದರೀ ! ಅಪರಾಧಿನಿಯಾದ ಆ ಪೂತನಿಯನ್ನು ವಧಿಸಿದರೆ ನಿರಪರಾಧಿನಿಯಾದ ಸತ್ಯಭಾಮೆಯನ್ನು ನೋಯಿಸುವೆನೇ ?

**ಸತ್ಯಭಾಮೆ**—ಸತ್ಯಭಾಮೆಯನ್ನು ನೋಯಿಸಲಿಲ್ಲ ! ಸಾಯಿಸಿದಿರಿ. ಅವಳ ಪ್ರಾಣವನ್ನೇ ಕೊಂದಿರಿ !

**ಕೃಷ್ಣ**—ಇದೇನು ಭಾಮೇ ! ಸ್ವಲ್ಪವೂ ಶಾಂತವಿಲ್ಲದೆ ಮಾತನಾಡುವೆಯಲ್ಲಾ ! ನಾನು ನಿನಗೆ ಮಾಡಿದ ಅಂತಹ ಅಪರಾಧವೇನು ?

**ಸತ್ಯಭಾಮೆ**—ತಾವು ಯಾವ ಅಪರಾಧವನ್ನೂ ಮಾಡಲಿಲ್ಲ ; ಆದರೆ,

ಕಂ|| ಮಾನಿನಿಯರ್ಗೆಳೆಯೊಳಗವ |
ಮಾನಂ ತಾಂ ಪ್ರಾಣಹಾನಿಯಿಂ ಪಿರಿದೆನಿಪಾ ||
ಮಾನಿತರ ನುಡಿಯ ಬಲ್ಲೈ |
ಮಾನಚ್ಯುತಿಯೆನಗೆ ಮರಣದಿಂ ಪಿರಿದಲ್ತೇ || ೮ ||

ಅಷ್ಟು ಮಂದಿಯಮುಂದೆ ಅವಮಾನಿತಳಾದ ನಾನು ಪ್ರಾಣದಿಂದಿದ್ದರೂ ಮೃತಪ್ರಾಯಳಾಗಿರುವೆನು.

**ಕೃಷ್ಣ**—ರಮಣೀ! ಕೋಪಿಸದಿರು; ನಾನು ಅಪರಾಧಿಯಲ್ಲ.

ಕಂ|| ಭಾವಮೆರಡಿಲ್ಲಮೆನ್ನೊಳ್ |
ಭಾವಕಿ ಸಂದೇಹಮುಳಿದು ಸಂತಸದಿರು ಸೀಂ ||
ದೇವಿ, ವರ ಸತ್ಯಭಾಮೆಯ |
ಸೇವಕನೀ ಕೃಷ್ಣನೆಂದು ಪೇಳ್ವುದು ಲೋಕಂ || ೯ ||

ಜನರು ನನ್ನನ್ನು ಸತ್ಯಭಾಮಾ ಕಿಂಕರನೆಂದು ಹೇಳುವುದರಲ್ಲಿ ಕಾಣುವುದಿಲ್ಲವೇ ನನಗೆ ನಿನ್ನಲ್ಲಿರುವ ಅನುರಾಗವು!

**ಸತ್ಯಭಾಮೆ**—ತಾವು ನನ್ನನ್ನು ಪ್ರೀತಿಯಿಂದ ಕಾಣುತ್ತಲೇ ಇದ್ದಿರಿ. ನಾನು ತಮಗಿಂತಲೂ ಪ್ರಿಯವಾದ ವಸ್ತುವು ಮತ್ತೊಂದು ಇಲ್ಲವೆಂದು ಭಾವಿಸಿರುವುದರಿಂದಲೇ ತಮ್ಮ ಉದಾಸೀನತೆಯಿಂದ ಮಿತಿಯಿಲ್ಲದ ದುಃಖ ಭಾಗಿನಿಯಾಗಿ ಪ್ರಾಣದಿಂದಿದ್ದರೂ ಇಲ್ಲದವಳಂತೆ ಆಗಿರುವುದು.

**ಕೃಷ್ಣ**—ಎಂ ಪ್ರಿಯೇ! ಕೋಪಿಸಬೇಡ. ಹೀಗೆ ಬಾ.

**ಸತ್ಯಭಾಮೆ**—ಪ್ರಿಯವಾದ ವಸ್ತುವನ್ನು ನಿಮ್ಮಿಂದ ಯಾವಳು ಪಡೆದಳೋ ಅವಳಲ್ಲವೇ ನಿಮ್ಮ ಪ್ರಿಯೆಯು! ನಾನು ವಾಙ್ಮಾತ್ರ ಪ್ರಿಯೆಯು. ಸಾಕು ಸಾಕು. ಈ ಥಳುಕಿನ ಸಂಬೋಧನೆಗಳು!

**ಕೃಷ್ಣ**—ಅಯ್ಯೋ! ಮರುಳೇ! ಪಾರಿಜಾತ ಪುಷ್ಪವನ್ನು ನಾನು ರುಕ್ಮಿಣಿಗೆ ಕೊಟ್ಟುದನ್ನು ಕುರಿತು ಹೇಳುವೆಯೋ? ಸರಿ! ಸರಿ! ಚೆನ್ನಾಯಿತು! ಇದು ಯಾವ ಮಹತ್ತರವಾದ ವಿಷಯವೆಂದು ನೀನು ಕೋಪಗೊಂಡೆಯೇ ಭಾಮೇ! ಬಲು ಚೆನ್ನಾಯಿತು! ಬಲು ಚೆನ್ನಾಯಿತು!!

**ಸತ್ಯಭಾಮೆ**—ತಾವು ನಡೆಸಿದ್ದು ಇಷ್ಟೆನೋ? ಪಾಪ!

ಕಂ|| ಸವತಿಯರೊಳ್ ನೀವೆನಗಿಂ |
ದವಮಾನಂಗೈದುದಲ್ಲದಾ ನಾರದನುಂ ||
ವಿವಿಧಾಲಾಪದೆ ನನ್ನಂ |
ತವೆ ಜರಿದಂ ಜೋಗಿಗೇತಕಿಂತು ಕುಚೋದ್ಯಂ || ೧೦ ||

ಮತ್ತು ವಿಧವಿಧವಾಗಿ ನನ್ನನ್ನು ಪರಿಹಾಸ್ಯ ಮಾಡುತ್ತಿದ್ದ ಆ ನಾರದನ ಮಾತುಗಳನ್ನು ವಿನೋದದಿಂದ ಕೇಳುತ್ತ ಪ್ರತಿಮಾತನ್ನಾಡದೆ ಕುಳಿತಿದ್ದು, ನಿಮ್ಮ ವಿನೋದವೆಲ್ಲವೂ ಪೂರ್ತಿಯಾದ ಮೇಲೆ ಈಗ ಈ ಮೃದುವಾದ ಮಾತುಗಳಿಂದ ನನ್ನನ್ನು ಸಂತೈಸಲು ಬಂದಿರುವಿರಲ್ಲವೇ? ನಿಮ್ಮ ಕೈಹಿಡಿದ ನನಗವಮಾನವೆಂದಿಗೂ ಆಗಲಾರದೆಂದಿದ್ದ ನನಗೆ ನಿಮ್ಮಿಂದಲೇ ಅವಮಾನವಾದುದರಿಂದ ನಾನು ಪ್ರಾಣದಿಂದಿದ್ದರೂ ನನ್ನ ಜನ್ಮವೇ ಬೇರೆಯಾಯಿತು. ಆದುದರಿಂದ ಇನ್ನು ತಮ್ಮ ಪ್ರಿಯೆ ಯಾರು? ಆ ರುಕ್ಮಿಣಿಯು. ಆದಕಾರಣ ಬರುವ ಜನ್ಮದಲ್ಲಿಯಾದರೂ ನಾನು ತಮಗೇ ಪ್ರಿಯೆಯಾಗುವಂತೆ ವರವನ್ನು ಪಡೆಯುವುದಕ್ಕಾಗಿ ತಪಸ್ಸಿಗೆ ಹೊರಡಲು ದಯಮಾಡಿ ನನಗಪ್ಪಣೆಯನ್ನು ಕೊಡಬೇಕಾಗಿ ಬೇಡಿಕೊಳ್ಳುವೆನು. (ಪೋಣಕಾಬೂರುವಳು.)

**ಕೃಷ್ಣ**—(ಕೈಹಿಡಿದೆತ್ತಿ) ಎಲೆ ದೇವೀ! ಸತ್ಯಭಾಮೇ! ನಿನಗೆ ಕೋಪತಾಪಗಳು ಮಿತಿಮೀರಿದುವು. ಸ್ವಲ್ಪ ಸ್ಮರಿಸು, "ಪತ್ನಿಯರೆಲ್ಲರಲ್ಲಿಯೂ ನಮ್ಮ ಕೃಷ್ಣನಿಗೆ ಸತ್ಯಭಾಮೆಯೇ ಪರಮಾಪ್ತಳು, ಗುಣಶಾಲಿನಿಯು." ಎಂದು ನಮ್ಮ ತಾಯಿಯಾದ ದೇವಕೀದೇವಿಯು ಎಲ್ಲರಲ್ಲಿಯೂ ಆಗಾಗ ಹೇಳಿಕೊಂಡು ಸಂತೋಷಪಡುತ್ತಿರುವುದನ್ನು ನೀನೇ ನೋಡಿ ಕೇಳಿರಬಹುದಲ್ಲವೇ? ಈ ದಿನ ಮಾತ್ರ ಆ ರುಕ್ಮಿಣಿಯ ಸಮಕ್ಷಮದಲ್ಲಿ ನಾರದರು ಪುಷ್ಪವನ್ನು ತಂದುಕೊಟ್ಟುದರಿಂದ ನೀನು ಇಷ್ಟು ಅಸಮಾಧಾನಪಡಲು ಕಾರಣವಾಯಿತು. ಬೇಡ, ಚಿಂತಿಸಬೇಡ; ಆ ರುಕ್ಮಿಣಿಗೆ ಒಂದು ಪುಷ್ಪವನ್ನು ಕೊಟ್ಟುದು ಯಾವ ಮಹಾ ವಿಶೇಷವು! ಅದರಿಂದಲೇ ಅವಳಲ್ಲಿ ನನಗೆ ಪ್ರೀತಿ ಹೆಚ್ಚೆಂದು ನೀನು ಭಾವಿಸುವುದಾದರೆ, ನಾನೀಗಲೇ ದೇವಲೋಕಕ್ಕೆ ಹೋಗಿ ಅಂತಹ ನೂರಾರು ಪುಷ್ಪಗಳನ್ನು ಬಿಡುವ ಆ ಪಾರಿಜಾತ ವೃಕ್ಷವನ್ನೇ ನಿನಗೆ ತಂದುಕೊಡುವೆನು. ನಿತ್ಯವೂ ನೀನಾ ಪುಷ್ಪಗಳನ್ನು ಮುಡಿದಾನಂದಿಸು. ಆಗಲಾದರೂ ನಿನ್ನಲ್ಲಿ ನನಗೆ ಅತ್ಯಂತ ಪ್ರೀತಿಯಿರುವುದೆಂದು ವ್ಯಕ್ತವಾಗುವುದೋ ಇಲ್ಲವೋ?

**ಸತ್ಯಭಾಮೆ**—(ಸಂತೋಷದಿಂದ) ಆರ್ಯಪುತ್ರಾ ! ಪಾರಿಜಾತವೃಕ್ಷವನ್ನು ತಂದುಕೊಡುವುದು ನಿಜವೇ !

**ಕೃಷ್ಣ**—ಭಾಮೇ, ನಿನ್ನಲ್ಲಿ ನಾನು ಅನೃತವನ್ನಾಡುವೆನೇ ? ಇದೇ ಪ್ರತಿಜ್ಞೆಯೆಂದು ತಿಳಿ.

**ಸತ್ಯಭಾಮೆ**—ಬಹಳ ಸಂತೋಷವಾಯಿತು. ನನ್ನ ಅಪರಾಧಗಳನ್ನು ಮನ್ನಿಸು. ನೀನು ನನ್ನನ್ನು ಬೀಸಣಿಗೆಯಿಂದ ಬೀಸುತ್ತಿದ್ದಾಗ ಆ ಪುಷ್ಪವನ್ನು ಮುಟ್ಟಿದ್ದ ನಿನ್ನ ಕೈಯ ಸುಗಂಧವೇ ನನಗಾಶ್ಚರ್ಯವನ್ನುಂಟುಮಾಡಿತು. ಇನ್ನು ಪಾರಿಜಾತವೃಕ್ಷವನ್ನು ತರಿಸುವ ಪ್ರಯತ್ನವನ್ನು ಮಾಡಲೇ ಬೇಕು.

**ಕೃಷ್ಣ**—ನಿಜ ! ನಾನೇ ದೇವಲೋಕಕ್ಕೆ ಹೋಗಿಬರಲೇ ! (ಆಲೋಚಿಸಿ) ಏತಕ್ಕೆ ! ಈ ಕಾರ್ಯಕ್ಕೆ ನಾನೇತಕ್ಕೆ ಹೋಗಬೇಕು. ನಾರದರೊಡನೆ ದೇವೇಂದ್ರನಿಗೆ ಹೇಳಿಕಳುಹಿಸಿದರೆ ವೃಕ್ಷವನ್ನು ಆತನೇ ಕಳುಹಿಸಿ ಕೊಡುವನು.

**ಸತ್ಯಭಾಮೆ**—ನಾರದರು ಕಲಹಪ್ರಿಯರು. ಮತ್ತೇನು ರಗಳೆಯನ್ನು ಹಚ್ಚುವರೋ !

**ಕೃಷ್ಣ**—ಹಾಗೆ ತಿಳಿಯಬೇಡ ! ಒಂದುವೇಳೆ ಗದ್ದಲವನ್ನು ಹಚ್ಚಿದರೂ ಚಿಂತೆಯಿಲ್ಲ ; ಪಾರಿಜಾತವೃಕ್ಷವು ನಿನ್ನ ವಶವಾಗುವುದೆಂದು ತಿಳಿ.

**ಸತ್ಯಭಾಮೆ**—ಬಹಳ ಸಂತೋಷ. (ನಾರದ ಪ್ರವೇಶಿಸುವನು.) ೨೨

**ಕೃಷ್ಣ ಸತ್ಯಭಾಮೆಯರು**— ಮುನೀಂದ್ರರಿಗೆ ನಮಸ್ಕರಿಸುವೆವು.

**ನಾರದ**—ನಿಮಗೆ ಮಂಗಳವಾಗಲಿ. ಸತ್ಯಭಾಮಾದೇವೀ ! ಏನು ಮುಖದಲ್ಲಿ ಏನೋ ಅಪೂರ್ವಾನಂದವುಂಟಾಗಿರುವಂತೆ ತೋರುವುದಲ್ಲಾ ! ಕಾರಣವೇನು ?

**ಸತ್ಯಭಾಮೆ**—ಪೂಜ್ಯರ ಆಶೀರ್ವಾದಾನುಗ್ರಹಗಳೇ ಕಾರಣ !

**ನಾರದ**—ಅಂದರೆ ?

**ಸತ್ಯಭಾಮೆ**—ತಾವು ರುಕ್ಮಿಣಿಗೆ ಪಾರಿಜಾತ ಪುಷ್ಪವೊಂದನ್ನು ತಂದು ಕೊಟ್ಟುದರಿಂದಲ್ಲವೇ ಆರ್ಯಪುತ್ರನು ದೇವಲೋಕದ ಪಾರಿಜಾತವೃಕ್ಷ ವನ್ನೇ ನನಗೆ ತಂದುಕೊಡುವೆನೆಂದು ವಾಗ್ದಾನಮಾಡಿರುವುದು. ಆದುದ ರಿಂದ ನನ್ನ ಸಂತೋಷಕ್ಕೆ ತಾವೇ ಮೂಲಕಾರಣರು.

**ನಾರದ**—ಓಹೋ! ಹಾಗೋ! ಬಹಳ ಸಂತೋಷ. ಬಹಳ ಸಂತೋಷ. ಪಾರಿಜಾತವೃಕ್ಷವನ್ನು ತಂದುಕೊಡುವುದಾಗಿ ಶ್ರೀ ಕೃಷ್ಣನೇನೋ ನಿನಗೆ ವಾಗ್ದಾನಮಾಡಿರಬಹುದು. ಆದರೆ ಅದನ್ನು ತರುವುದು ಸಾಧ್ಯ ವೆಂದು ನನಗೆ ಮಾತ್ರ ತೋರುವುದಿಲ್ಲ.

**ಕೃಷ್ಣ**—ಸ್ವಾಮಿಾ! ಏನು ಹೀಗೆ ಹೇಳುವಿರಿ? ದೇವೇಂದ್ರನ ಬಳಿಯಲ್ಲಿ ರುವ ಪಾರಿಜಾತ ವೃಕ್ಷವನ್ನು ತರುವುದು ನನಗೆ ಅಸಾಧ್ಯವೇ?

**ನಾರದ**—(ಆತ್ಮ) ನಾನು ಹುಟ್ಟಿಸಿದ ಸವತಿಯರ ಜಗಳವು ನನ್ನ ಕಾರ್ಯಕ್ಕೆ ಅನುಕೂಲವಾಯಿತು. ಈಗ ಇಂದ್ರನ ಮದವನ್ನು ಮುರಿಯಲು ತಕ್ಕ ಸಂಧಿಯು ಸಿಕ್ಕಿತು. (ಪ್ರಕಾಶ) ಕೃಷ್ಣಾ! ನೀನು ನಿನ್ನ ಪತ್ನಿಯ ರಲ್ಲಿರುವಂತೆಯೇ ಆ ದೇವೇಂದ್ರನು ಶಚೀದೇವಿಯಲ್ಲಿ ಅತ್ಯಂತ ಪ್ರೀತಿ ಪರವಶನಾಗಿರುವನು. ಆದುದರಿಂದ ಶಚೀದೇವಿಯಪೇಕ್ಷೆಯಂತೆ ಇಂದ್ರನು ಆ ವೃಕ್ಷವನ್ನು ಆಕೆಯ ಸಂತೋಷಾರ್ಥವಾಗಿ ಆಕೆಗೆ ಒಪ್ಪಿಸಿರುವನು. ಹೀಗಿರುವಲ್ಲಿ ಲೋಕದಲ್ಲಿ ಅರ್ಧಾಂಗಿಗೆ ಪ್ರಿಯವಾದ ವಸ್ತುವನ್ನು ಎಂಥವನಾದರೂ, ವಂಚಿಸಿ ಪರರಿಗೆ ಕೊಡುವನೇ? ಅದ ರಲ್ಲಿಯೂ ದೇವೇಂದ್ರನಂತಹ ಮಹಾ ವೀರನು ಈ ಕಾರ್ಯವನ್ನು ಮಾಡುವನೇ?

**ಕೃಷ್ಣ**—ಸ್ವಾಮಿಾ! ಹಾಗೆ ಭಾಷಿಸದೇಡಿ; ಈ ಕಾರ್ಯಕ್ಕಾಗಿ ತಮ್ಮನ್ನೇ ಆ ದೇವೇಂದ್ರನ ಬಳಿಗೆ ನನ್ನ ವಿಜ್ಞಾಪನೆಯೊಂದಿಗೆ ಹೋಗಲು ಪ್ರಾರ್ಥಿ ಸಿಕೊಳ್ಳಬೇಕೆಂದು ತಮ್ಮನ್ನು ಸ್ಮರಿಸಿದೆನು. ತಾವು ದೇವೇಂದ್ರನಿಗೆ

ನನ್ನಭಿಮತವನ್ನು ತಿಳಿಸಿದರೆ ಸಾಕು ; ಆತನು ಪಾರಿಜಾತವೃಕ್ಷವನ್ನು ಅನುಮಾನಿಸದೆ ಕಳುಹಿಸಿಕೊಡುವನು.

**ನಾರದ**—ಕೃಷ್ಣಾ ! ನಿನಗೆ ಭ್ರಾಂತಿಯೋ ಹೇಗೆ? ಕೇಳು ; ಒಂದಾನೊಂದು ದಿನ ಪಾರ್ವತೀಪರಮೇಶ್ವರರು ಅಂತರಿಕ್ಷ ಮಾರ್ಗದಲ್ಲಿ ಸಂಚಾರ ಹೋಗುತ್ತಿರುವಾಗ ಪಾರ್ವತಿಯು ನಂದನವನದಲ್ಲಿದ್ದ ಆ ಪಾರಿಜಾತ ವೃಕ್ಷವನ್ನು ನೋಡಿ ಅದನ್ನು ತನಗೆ ತರಿಸಿಕೊಡಬೇಕೆಂದು ಮಹೇಶ್ವರನನ್ನು ಕೇಳಲು, ಆತನು ಬೇಡವೆಂದು ಆಕೆಯ ಹಠವನ್ನು ಶಾಂತಿಗೊಳಿಸಿ ಕರೆದುಕೊಂಡು ಹೋದನು. ಹೀಗಿರುವಲ್ಲಿ ಪಾರಿಜಾತ ವೃಕ್ಷವನ್ನು ನೀನು ಅಪೇಕ್ಷಿಸಿದರೆ ಫಲವಿಲ್ಲ.

**ಕೃಷ್ಣ**—ಸ್ವಾಮಿಾ, ಶಂಕರನ ಅನುಗ್ರಹದಿಂದಲೇ ಸಮುದ್ರಮಥನಕಾಲದಲ್ಲಿ ಆ ಪಾರಿಜಾತವೃಕ್ಷವು ದೇವೇಂದ್ರನ ಕೈಸೇರಿದುದು. ಆದಕಾರಣ ಶಿವನು ದತ್ತಾಪಹಾರಮಾಡಬಾರದೆಂದು ಅದನ್ನು ಕೇಳದೆ ಸುಮ್ಮನಾದನು. ನಾನಾದರೋ, ಇಂದ್ರನಿಗಾಗಿ ನರಕಾಸುರನನ್ನು ವಧಿಸಿ ಇಂದ್ರಮಾತೆಯ ಜೀವರತ್ನಕುಂಡಲಗಳನ್ನಾಕೆಗೆ ಕೊಟ್ಟೆನೆಂಬ ಕೃತಜ್ಞತೆಯು ದೇವೇಂದ್ರನಿಗಿರುವುದು. ಆದುದರಿಂದ ಆತನು ನನ್ನ ಮಾತಿಗೆ ಪ್ರತಿಹೇಳಲಾರನು ; ಆದಕಾರಣ ತಾವು ಇಂದ್ರನ ಬಳಿಗೆ ಹೋಗಿ ನನ್ನ ಭೀಷ್ಟವನ್ನು ತಿಳಿಸಿದರೆ ಸಾಕು. ಪಾರಿಜಾತವನ್ನು ಕಳುಹಿಸಿಕೊಡುವನು.

**ನಾರದ**—ನೀನು ತಿಳಿದೂ ತಿಳಿಯದವನಂತೆ ಮಾತನಾಡುವೆಯಲ್ಲಾ ! ನಾನೇನನ್ನು ಹೇಳಲಿ ! ನೀನು ಮಾಡಿದ ಉಪಕಾರವು ಆ ಪದವೀ ಮತ್ತನಾದ ಇಂದ್ರನಿಗೆ ಜ್ಞಾಪಕವಿರುವುದೇ ! ದಿಕ್ಪಾಲಕರೂ ಅನೇಕ ದೇವತೆಗಳೂ, ಮುನಿಗಣಗಳೂ ಸೇರಿರುವಲ್ಲಿ ತನ್ನ ಸಮಾನರು ತ್ರಿಭುವನದಲ್ಲಿ ಯಾರೂ ಇಲ್ಲವೆಂತಲೂ, ಮರ್ತ್ಯರು ಅಮರ್ತ್ಯರಿಗೆ ಸಾಟಿಯಾಗಲಾರರೆಂತಲೂ, ನಾನಾ ವಿಧವಾಗಿ ಮರ್ತ್ಯರನ್ನು ಅಲ್ಪೀಕರಿಸಿ, ಅಮರ್ತ್ಯಾಧಿಪನೆಂದು ನನ್ನೊಡನೆ ತನ್ನನ್ನು ತಾನೇ ಹೊಗಳಿಕೊಂಡು ಹಿಗ್ಗಿ

ಬೀಗಿದನು. ಇಂಥವನು ನಿನ್ನಭೀಷ್ಟವನ್ನು ಕೇಳಿದೊಡನೆಯೇ ನಕ್ಕು ಪರಿಹಾಸ ಗೈವನೆಂಬಲ್ಲಿ ಸಂದೇಹವಿಲ್ಲ. ಒಂದು ವೇಳೆ ನಾನೀವಾರ್ತೆಯನ್ನು ಆತನಿಗೆ ತಿಳಿಸಿದರೆ, ನಿರ್ಮಲನೂ, ಪರಮಸಾಹಿಸಿಯೂ ಆದ ನಿನ್ನನ್ನು ಆತನಿಂದ ಅವಮಾನಪಡಿಸಲು ಕಾರಣವಾಗುವುದೇನೋ ನಿಜ. ಆದುದರಿಂದ ಪಾರಿಜಾತವನ್ನು ತರುವುದು ಆಗದ ಕಾರ್ಯ.

**ಕೃಷ್ಣ**—ಏನು! ಇದು ಆಗದ ಕಾರ್ಯವೇ? ನನಗೆ ಇದು ಅಸಾಧ್ಯವೇ?

**ನಾರದ**—ನಿನಗೆ ಶಕ್ತಿಯಿಂದ ಸಾಧಿಸಲು ಸಾಧ್ಯವಾದೀತೇ ಅಲ್ಲದೆ ಯುಕ್ತಿಯಿಂದ ಸಾಧ್ಯವೇ ಅಲ್ಲ. ಅದರಿಂದ ಇದರ ಪ್ರಯತ್ನವನ್ನು ಬಿಡು.

**ಕೃಷ್ಣ**—(ಕೋಪದಿಂದ)

ಕಂ|| ಬಿಡುವೆನೊ ಯತ್ನವನಿಂದಾಂ |
ಬಿಡುವೆನೊ ಘನಶಾರ್ಙಚಾಪದಿಂ ಶರತತಿಯಂ ||
ಪಿಡಿವೆನೊ ಸುರನಾಥನನಾಂ |
ಪಡೆವೆನೊ ವರಪಾರಿಜಾತ ಸುರಭೂರುಹಮಂ || ೧೧ ||

ನಾರದರೇ! ಆ ಮದಾಂಧನಾದ ದೇವೇಂದ್ರನು ಒಂದು ವೇಳೆ ತಾನು ವೃತ್ರಾದಿಗಳನ್ನು ಸಂಹರಿಸಿದ ಮಹಾ ವೀರನೆಂತಲೂ, ವಜ್ರಪಾಣಿಯೆಂತಲೂ ದುರಹಂಕಾರದಿಂದ ಪಾರಿಜಾತವೃಕ್ಷವನ್ನು ಕೊಡದೆ ತಿರಸ್ಕರಿಸಬಹುದು; ಆದರೆ ಅವನಿಗೆ ಹೆದರಿ ನಾನು ನಮ್ಮ ಭಾಮೆಯೊಡನೆ ಮಾಡಿರುವ ಪ್ರತಿಜ್ಞೆಯನ್ನೂ ವಾಗ್ದಾನವನ್ನೂ ಎಂದಿಗೂ ತಪ್ಪಲಾರನೆಂದು ತಿಳಿಯಿರಿ. ೨೩ ಈ ಭೂತಲವು ರಸಾತಲಕ್ಕಿಳಿಯಲಿ; ಕುಲಗಿರಿಗಳು ಕುಣಿದಾಡಲಿ; ಸಾಗರಗಳು ಮೇರೆ ಮೀರಲಿ; ದಿಗ್ಗಜಗಳಿಗೆ ಸ್ಥಳಪಲ್ಲಟವಾಗಲಿ; ಚಂದ್ರಸೂರ್ಯರು ಕಾಲಚಕ್ರಚಾರವನ್ನತಿಕ್ರಮಿಸಿ ಧರೆಗುರುಳಲಿ: ನನ್ನ ಪ್ರತಿಜ್ಞೆಯು ವ್ಯರ್ಥವಾಗಲಾರದು. ಆದಕಾರಣ ಆ ಮದೋನ್ಮತ್ತನಾದ ದೇವೇಂದ್ರನು ತನಗೆ ಸಹಾಯಕರಾದ ದಿಕ್ಪಾಲಕ

ದೇವಗಂಧರ್ವ ಕಿನ್ನರಾದಿಗಳೊಡನೆ ನಾಳಿನದಿನವೇ ಬಂದು ನನ್ನೊಡನೆ ಯುದ್ಧಮಾಡಲಿ. ನಾನು ಗರುಡಾರೂಢನಾಗಿ ನಂದನವನಕ್ಕೆ ಬಂದು ಪಾರಿಜಾತ ವೃಕ್ಷವನ್ನು ತೆಗೆದುಕೊಂಡೇ ಬರುವೆನು.

**ನಾರದ**—ಭಲ ! ಭಲ ! ಇದೀಗ ಶೌರ್ಯವು ! ಇದೀಗ ಪ್ರತಿಜ್ಞೆಯು ! ಕೃಷ್ಣಾ ! ಇದೇ ಉಚಿತವಾದ ಕಾರ್ಯವು. ನಾನೀಗಲೇ ಹೋಗಿ ನಿನ್ನಭಿಲಾಷೆಯನ್ನು ದೇವೇಂದ್ರನಿಗೆ ತಿಳಿಸುವೆನು.

**ಕೃಷ್ಣ**—ಹಾಗೆಯೇ ಮಾಡಿ. (ಸತ್ಯಭಾಮೆಯನ್ನು ನೋಡಿ) ಭಾಮೇ, ನಾಳಿನ ದಿನವೇ ನಾನು ದೇವಲೋಕಕ್ಕೆ ಪ್ರಯಾಣಮಾಡುವೆನು.

**ಸತ್ಯಭಾಮೆ**—ಪ್ರಿಯಾ ! ಆದರೆ ನನಗೊಂದು ಸಂದೇಹವುಂಟಾಗಿರುವುದು.

**ಕೃಷ್ಣ**—ಅದೇನು ?

**ಸತ್ಯಭಾಮೆ**—ಏನೆಂದರೆ, ನೀನು ದೇವಲೋಕಕ್ಕೆ ಹೊರಡಬೇಕೆಂದಿರುವಾಗ ದೇವಿಯಾವಳಾದರೂ ಕಣ್ಣಿಗೆ ಬಿದ್ದರೆ ಆಗ ಈ ಭಾಮೆಯ ಸ್ಮರಣೆಯೇ ತಪ್ಪಿಹೋಗುವುದೋ ಏನೋ !

**ಕೃಷ್ಣ**—(ನಕ್ಕು) ಭಾಮೇ ! ನಿನಗೆ ನನ್ನಲ್ಲಿ ಯಾವಾಗಲೂ ಇಂತಹ ಸಂದೇಹವೇ ! ಸಾಕು ! ಒಂದುವೇಳೆ ನಿನಗಂತಹ ಸಂಶಯವಿದ್ದರೆ, ನೀನೂ ನನ್ನೊಡನೆ ಬಾ, ಗರುಡಾರೂಢರಾಗಿ ಇಬ್ಬರೂ ನಂದನವನಕ್ಕೆ ಪಾರಿಜಾತಾಪಹರಣಕ್ಕಾಗಿ ಹೋಗುವ.

**ಸತ್ಯಭಾಮೆ**—ಬಹಳ ಸಂತೋಷ.

(ನಿಷ್ಕ್ರಮಿಸುವರು.)

## ಪ್ರಥಮಾಂಕಂ ಸಂಪೂರ್ಣಂ

---

## ದ್ವಿತೀಯಾಂಕಂ

### ದೃಶ್ಯ ೧ ಸ್ವರ್ಗಲೋಕಪ್ರಾಂತ್ಯ

**ನಾರದ**—ಇಳ ಇಂದ್ರನ ದುರಹಂಕಾರವನ್ನು ಅಡಗಿಸಲು ಉಪೇಂದ್ರನನ್ನು ಕೆರಳಿಸಿದುದಾಯಿತು ; ಒಂದು ವೇಳೆ ಕೃಷ್ಣನ ಪರಾಕ್ರಮಕ್ಕೆ ಹೆದರಿ ಇಂದ್ರನು ಪಾರಿಜಾತ ವೃಕ್ಷವನ್ನು ಕೊಟ್ಟುಬಿಟ್ಟಲ್ಲಿ, ಕಲಹಪರ್ಯವ ಸಾನವು ಕೆಟ್ಟುಹೋಗುವುದು. ಅದಕಾರಣ ನಾನೀಗ ಶಚೀದೇವಿ ಯನ್ನು ಕಂಡು, ಪಾರಿಜಾತವೃಕ್ಷವನ್ನು ಕೃಷ್ಣನಿಗೆ ಕೊಡಕೂಡದೆಂದು ಆಕೆ ತನ್ನ ಪತಿಯೊಡನೆ ಹಠಹಿಡಿಯುವಂತೆ ಮಾಡುವೆನು. ಪತ್ನಿಯ ಮಾತಿಗೆ ಮರುಳಾಗಿ, ಇಂದ್ರನು ಕೃಷ್ಣನೊಡನೆ ಯುದ್ಧಕ್ಕೆ ಬರುವನು. ಆಗ ಅವನ ದುರಹಂಕಾರಕ್ಕೆ ತಕ್ಕಂತೆ ಕೃಷ್ಣನಿಂದ ಚೆನ್ನಾಗಿ ದೇಹಶುದ್ಧಿ ಯಾಗಿ, ಅನಂತರ ಮನಶ್ಶುದ್ಧಿಯಾಗುವುದು. ನನ್ನ ಸಂಕಲ್ಪವೂ, ಶ್ರೀ ಕೃಷ್ಣನ ಪ್ರತಿಜ್ಞೆಯೂ ನೆರವೇರುವುವು. ಆಗಲಿ. (ಮುಂದೆ ನೋಡಿ) ಇದು ಯಾರು ? ಓಹೋ ! ಶಚೀದೇವಿಯ ಸಖಿಯಾದ ಸೌದಾಮಿನಿಯು ! ಎಲೌ ! ಸೌದಾಮಿನೀ ! ಎಲ್ಲಿಗೆ ಹೋಗುತ್ತಿರುವೆ ?

**ಸೌದಾಮಿನಿ**—(ಪ್ರವೇಶಿಸಿ) ಪೂಜ್ಯರಿಗೆ ವಂದಿಸುವೆನು. ಇಂದ್ರಾಣಿಯು ಪ್ರಸಿದ್ಧಗಾಯಕಿಯಾದ ಗಾನಮೋಹಿನಿಯೆಂಬ ಕಿನ್ನರಾಂಗನೆಯ ಸಂಗೀತವನ್ನು ಕೇಳಬೇಕೆಂದಪೇಕ್ಷಿಸಿರುವಳು. ಆದಕಾರಣ ನಾನು ಆ ಗಾಯಕಿಯನ್ನು ಕರೆಯಲು ಹೋಗುತ್ತಿರುವೆನು.

**ನಾರದ**—ನಿನಗೆ ಶುಭವಾಗಲಿ. ನಾನು ಇಂದ್ರಾಣಿಯನ್ನು ಕಾಣಬಹುದೇ ?

**ಸೌದಾಮಿನಿ**—ಪೂಜ್ಯರೇ ! ತಾವು ಕಾಣಲಾತಂಕವೇನಿರುವುದು !

**ನಾರದ**—ಬಹಳ ಸಂತೋಷ. ನೀನು ಹೊರಡು. ಆ ಸಂಗೀತವು ಪೂರಯಿಸಿದನಂತರ ನಾನು ಬಂದು ಇಂದ್ರಾಣಿಯನ್ನು ನೋಡುವೆನು.

**ಸೌದಾಮಿನಿ**—ಅಪ್ಪಣೆ. **(ಹೋಗುವರು.)**

## ದೃಶ್ಯ ೨—ಶಚೀದೇವಿಯ ಅಂತಃಪುರ.

(ಶಚೀದೇವಿಯು ದೇವಾಂಗನೆಯರೊಡನೆ ಕುಳಿತಿರುವಳು. ಗಾನವಿನೋದಿನಿಯು ಸಂಗೀತವು ನಡೆಯುವುದು.)

**ನಾರದ**—(ಪ್ರವೇಶಿಸುವನು.) ೨೪

**ಶಚೀದೇವಿ**—ಪೂಜ್ಯರಿಗೆ ವಂದಿಸುವೆನು. ಈ ರತ್ನಪೀಠವನ್ನಲಂಕರಿಸಬೇಕು. (ಎಲ್ಲರೂ ವಂದಿಸುವರು.)

**ನಾರದ**—ಇಂದ್ರಾಣೀ! ನಿನಗೆ ಮಂಗಳವಾಗಲಿ. ಅಮರಿಯರೇ, ನಿಮ್ಮೆಲ್ಲರಿಗೂ ಶುಭವಾಗಲಿ.

**ಶಚೀದೇವಿ**—ಪೂಜ್ಯರ ಸಂದರ್ಶನದಿಂದ ಕೃತಾರ್ಥಳಾದೆನು. ವಿಶೇಷ ವಾರ್ತೆಯೇನಾದರೂ ಉಂಟೇ?

**ನಾರದ**—ಶಚೀದೇವೀ! ಸಕಲವಿಭವ ಪರಿಶೋಭಿತರಾದ ಶಚೀಪುರಂದರರಿಗೆ ಸಾಟಿಯಾದವರು ತ್ರಿಭುವನದಲ್ಲಿ ಯಾರೂ ಇಲ್ಲವೆಂದು ಕೇಳಿದ್ದೆನು. ಆ ನಿಮ್ಮ ವಿಭವಕ್ಕೂ ವಿಖ್ಯಾತಿಗೂ ಸ್ವಲ್ಪ ಕುಂದಕ ಬರುವಂತೆ ಕಾಣಬರುವುದರಿಂದ ಆ ವಿಚಾರವನ್ನು ನಿನ್ನಲ್ಲಿ ತಿಳಿಸಲು ಬಂದೆನು.

**ಶಚೀದೇವಿ**—(ಕಾತರಿಸಿ) ಏನು! ಏನು! ನಮ್ಮ ವಿಭವಕ್ಕೂ ವಿಖ್ಯಾತಿಗೂ ಕುಂದಕವೇ! ಚೆನ್ನಾಯಿತು! ವಿಚಾರವೇನು? ದಯವಿಟ್ಟು ತಿಳಿಸಬೇಕು.

**ನಾರದ**—ಕೇಳು; ಕಾಮಧೇನು, ಕಲ್ಪವೃಕ್ಷ, ಚಿಂತಾರತ್ನ, ಪಾರಿಜಾತ, ಇವುಗಳಲ್ಲವೇ ಸ್ವರ್ಗಲೋಕಕ್ಕೆ ಅಲಂಕಾರಪ್ರಾಯವಾಗಿ ಶಚೀಪುರಂದರರ ಭೋಗ್ಯ ವಸ್ತುಗಳಲ್ಲಿ ಪ್ರಖ್ಯಾತವಾದವುಗಳು?

**ಶಚೀದೇವಿ**—ನಿಜ! ಆದರೇನು?

**ನಾರದ**—ಇವುಗಳಲ್ಲಿ ಪಾರಿಜಾತವೃಕ್ಷವನ್ನು ನೀನು ಅತಿಪ್ರೀತಿಯಿಂದ ಕಾಪಾಡಿಕೊಂಡಿರುವೆಯೆಂದು ಕೇಳಿದ್ದೆನು.

**ಶಚೀದೇವಿ**—ನಿಜ.

**ನಾರದ**—ಆವೃಕ್ಷವು ಕ್ಷಿಪ್ರದಲ್ಲಿ ನಿಮ್ಮ ಕೈತಪ್ಪಿಹೋಗುವಂತೆ ತೋರುವುದು.

**ಶಚೀದೇವಿ**—(ಶಾತಂಸಿ) ಏನು! ಏನು! ಪಾರಿಜಾತವು ನಮ್ಮ ಕೈತಪ್ಪಿ ಹೋಗುವುದೇ? ಕಾರಣ?

**ನಾರದ**—ಇಂದ್ರನ ಪಾರಿಜಾತವನ್ನು ಉಪೇಂದ್ರನು ಅಪಹರಿಸುವುದೇ ಕಾರಣ.

**ಶಚೀದೇವಿ**—ಏನು! ಉಪೇಂದ್ರನು ಅಪಹರಿಸುವನೇ? ಆ ಶ್ರೀಕೃಷ್ಣನು! ಅದು ಹೇಗೆ?

**ನಾರದ**—ಹೇಗೆಂದರೆ; ಕೃಷ್ಣನು ಆ ದಿವ್ಯವೃಕ್ಷವನ್ನು ತಂದುಕೊಡುವುದಾಗಿ ಸತ್ಯಭಾಮೆಗೆ ವಾಗ್ದಾನ ಮಾಡಿರುವನು.

**ಶಚೀದೇವಿ**—ಇಷ್ಟುತಾನೇ! ಆ ವಾಗ್ದಾನವು ನಿಜವಾಗಿ ನಡೆಯುವುದೇ? ದೇವನಾಥನು ಸುಮ್ಮನಿರುವನೇ?

**ನಾರದ**—ಆ ನಂಬಿಕೆಯಿಲ್ಲದಿದ್ದರೆ ಕೃಷ್ಣನು ಅಂತಹಪ್ರತಿಜ್ಞೆಮಾಡುತ್ತಿದ್ದನೇ?

**ಶಚೀದೇವಿ**—ಛೀ! ದೇವಲೋಕದ ವೃಕ್ಷವನ್ನು ಮನುಷ್ಯರು ಅಪೇಕ್ಷಿಸುವಂತಾಯಿತೇ? ಇದಕ್ಕೆ ಕಾರಣವೇನು?

**ನಾರದ**—ಕಾರಣವಿನ್ನೇನು! ನಿನ್ನ ಪತಿಯು ಆಗಾಗ ರಾಕ್ಷಸರೊಡನೆ ಯುದ್ಧಮಾಡಲು ನೆಪಮಾತ್ರಕ್ಕೆ ಗೌರವಿಸಿ ಆ ಕೃಷ್ಣನನ್ನು ಈ ಲೋಕಕ್ಕೆ ಬರಮಾಡಿಕೊಳ್ಳುತ್ತಿದ್ದುದೇ ಕಾರಣ. ಇದರಿಂದ ಆ ಕೃಷ್ಣನು ಇಂದ್ರನಿಗೆ ತಾನು ಸಹಾಯಕನೆಂತಲೂ, ತಾನು ಕೇಳಿದ ವಸ್ತುವನ್ನು ಇಂದ್ರನು ಕೊಟ್ಟುಬಿಡುವನೆಂತಲೂ ಹೇಳಿಕೊಂಡು ಈ ಪ್ರತಿಜ್ಞೆ ಮಾಡಿರುವನು. ಪಾರಿಜಾತವು ಇಂದ್ರಪದವಿಗೂ, ಇಂದ್ರನ ಸತಿಯಾದ ನಿನ್ನ ವೈಭವಕ್ಕೂ ಮುಖ್ಯವಾದ ಚಿಹ್ನೆಯೆಂದು ನಾನು ತಿಳಿದಿದ್ದೆನು. ನೀವು ಅದನ್ನು ಅಗಲುವುದಾದರೆ, ಆ ಇಂದ್ರತ್ವವನ್ನು ಬೇಕಾದರೂ ಅವನು ನಾಳೆಯದಿನವೇ ಅಪೇಕ್ಷಿಸಲೂ ಬಹುದು. ನೀವು ಕೊಡಲೂ ಬಹುದು.

**ಶಚೀದೇವಿ**—ಪೂಜ್ಯರೇ! ಆರ್ಯಪುತ್ರನು ಕೃಷ್ಣನ ಈ ದುರಾಶೆಯನ್ನು ಸಾರ್ಥಕಗೊಳಿಸುವನೆ?

**ನಾರದ**—ನಾನು ಹೇಗೆ ಹೇಳಲಿ! ಆ ನಿನ್ನ ಗಂಡನಿಗೆ ವಿವೇಕವನ್ನು ಹೇಳುತ್ತಾ ಮಂತ್ರಿತ್ವ ಮಾಡುವನೋ, ಗೊಡ್ಡು ಬ್ರಾಹ್ಮಣನು. ಆತನಿಗೆ ಯುದ್ಧವೆಂದರೆ ಹೆದರಿಕೆ. ಸಾಧ್ಯವಾದ ಮಟ್ಟಿಗೆ ಯಾವಾಗಲೂ ಸಂಧಿಪ್ರಯತ್ನಗಳನ್ನೇ ಮಾಡುತ್ತಿರುವನು. ಅದರಲ್ಲಿಯೂ ಕೃಷ್ಣನೆಂದರೆ ಗುರುಶಿಷ್ಯರಿಬ್ಬರೂ ಹೆದರಿ ಅದರಿ ಅಲ್ಲಾಡಿಹೋಗುವರು. ಇದರಿಂದ, ಕೃಷ್ಣನಇಷ್ಟದಂತೆ ಪಾರಿಜಾತವನ್ನು ಕೊಟ್ಟುಬಿಟ್ಟಾರೆಂಬ ಸಂಶಯವು ನನ್ನನ್ನು ಬಹಳವಾಗಿ ಬಾಧಿಸುತ್ತಿರುವುದು.

**ಶಚೀದೇವಿ**—ಪೂಜ್ಯರೇ! ಕೃಷ್ಣನಾದರೆ ಹೆಚ್ಚಾಯಿತೇ? ಇಂದ್ರ ಪದವಿಗೆ ಮುಖ್ಯವಾದ ಪಾರಿಜಾತವನ್ನು ಕೊಡಲಾದೀತೇ?

**ನಾರದ**—ನಿಜ! ನಿಜ! ಎಂದಿಗೂ ಕೊಡಲಾಗದು. ಈ ದಿನ ಪಾರಿಜಾತವನ್ನಪೇಕ್ಷಿಸಿದ ಕೃಷ್ಣನು ಇಂದ್ರನ ಇತರ ಪ್ರಿಯವಸ್ತುಗಳನ್ನೂ ಅಪೇಕ್ಷಿಸಿಯಾನು! ಅಷ್ಟಕ್ಕೆ ಅವಕಾಶಕೊಡಕೂಡದೆಂದು ನೀನು ದೇವೇಂದ್ರನಿಗೆ ತಿಳಿಸಿ, ಪಾರಿಜಾತವನ್ನುಳಿಸಿಕೊಳ್ಳುವ ಯೋಚನೆಮಾಡಬೇಕೆಂದು ನಿನಗೆ ತಿಳಿಸಲು ಬಂದೆನು.

**ಶಚೀದೇವಿ**—ನಿಜ! ಹಾಗೆಯೇಮಾಡಬೇಕು. ಪೂಜ್ಯರೇ, ತಾವು ಮೊದಲೇ ಈ ಎಚ್ಚರಿಕೆಯನ್ನು ಕೊಟ್ಟುದಕ್ಕಾಗಿ ನಾನು ಕೃತಜ್ಞಳಾಗಿರುವೆನು.

**ದೇವೇಂದ್ರ**—(ಪ್ರವೇಶಿಸಿ)

ಕಂ|| ವಿಲಸಿತ ಜಲರುಹವನದೊಳ್ |
ಸುಲಲಿತ ಕಲಹಂಸಿಯಂತೆ ಸುರಕಾಂತಾನಂ ||
ಕುಲದೊಳ್ ಪರಮಾನಂದದೆ |
ನಲಿವ ಶಚೀದೇವಿಯೆಂತು ರಂಜಿಪಳಮಮಾ || ೧೨ ||

ಆಹಾ! ಇಂತಹ ವೈಭವದಿಂದ ಆನಂದ ಪಡುವ ಪುಣ್ಯವು, ನನ್ನ ಕೈಹಿಡಿದುದರಿಂದಲ್ಲವೇ ಈ ನನ್ನ ರಾಣಿಗೆ ಒದಗಿದ್ದು. ಈ ಕಾರಣ ದಿಂದಲೇ ಶಚೀಪುರಂದರರ ವಿಭವವನ್ನು ಕುರಿತು ಲೋಕತ್ರಯದಲ್ಲಿಯೂ, ಸಕಲರೂ ಕೊಂಡಾಡುವರೆಂದು ನಾರದರು ಆಗಾಗ ನನ್ನೊಡನೆ ಹೇಳು ತ್ತಿರುವರು. (ಮುಂದೆನೋಡಿ) ಅದೋ! ಪೂಜ್ಯರಾದ ನಾರದರೂ ಬಂದಿರುವರು. ಏನೋ ವಿಶೇಷವಾರ್ತೆಯಿರಬೇಕು. (ಮುಂದಕ್ಕೆ ಹೋಗಿ) ಪೂಜ್ಯರಿಗೆ ನಂದಿಸುವೆನು.

**ನಾರದ**—ಓಹೋ! ದೇವೇಂದ್ರಾ! ನಿನಗೆ ಶುಭವಾಗಲಿ.

**ಇಂದ್ರ**—ಪೂಜ್ಯರೇ! ತಮ್ಮಾಗಮನದಿಂದ ಬಹಳ ಸಂತೋಷವಾಯಿತು! ವಿಶೇಷ ವಾರ್ತೆಯೇನಾದರೂ ಉಂಟೇ?

**ನಾರದ**—ದೇವನಾಥಾ! ಶ್ರೀಕೃಷ್ಣನು ಒಂದು ಕಾರ್ಯಭಾಗಕ್ಕಾಗಿ ನನ್ನನ್ನು ನಿನ್ನಬಳಿಗೆ ಕಳುಹಿಸಿರುವನು.

**ಇಂದ್ರ**—ಏನು? ಶ್ರೀ ಕೃಷ್ಣನೇ? ಬಹಳ ಸಂತೋಷ; ಅಪ್ಪಣೆಯಾದರೆ ನಡೆಯಿಸಿಕೊಡುವೆನು.

**ಶಚೀದೇವಿ**—ಆರ್ಯಪುತ್ರಾ! ಅದು ಅಷ್ಟು ಸುಲಭವಾಗಿ ವಾಗ್ದಾನ ಮಾಡತಕ್ಕ ವಿಷಯವಲ್ಲ. ನಾವಧಾನವಾಗಿ ವಿಷಯವನ್ನು ತಿಳಿದು ಅನಂತರ ಪ್ರತ್ಯುತ್ತರ ಹೇಳತಕ್ಕುದಾಗಿರುವುದು.

**ಇಂದ್ರ**—ಓಹೋ! ಅದೇನು ಅಂತಹ ವಿಚಾರವು? ಶ್ರೀ ಕೃಷ್ಣನಿಗೆ ನನ್ನಿಂದ ಆಗಬೇಕಾದ ಅಂತಹ ಕಾರ್ಯವೇನಿರುವುದು?

**ನಾರದ**—ಮತ್ತೇನೂ ಇಲ್ಲವು! ನಿನ್ನ ಇಂದ್ರಪದವಿಯ ವೈಭವಕ್ಕೆ ಮುಖ್ಯ ವಾಗಿರುವ ವಸ್ತುಗಳಲ್ಲಿ ಒಂದನ್ನಾತನು ತನಗೆ ಕಳುಹಿಸಿಕೊಡಬೇಕೆಂದು ಕೇಳಿಬರುವಂತೆ ನನಗೆ ಹೇಳಿದನು.

**ಇಂದ್ರ**—ಏನು? ಇಂದ್ರಪದವಿಯ ವೈಭವಕ್ಕೆ ಮುಖ್ಯವಾಗಿರುವ ವಸ್ತು ವನ್ನೇ? ಯಾವುದನ್ನು?

**ನಾರದ**—ಆ ಪಾರಿಜಾತ ವೃಕ್ಷವನ್ನು.

**ಇಂದ್ರ**—ಏನು ? ಪಾರಿಜಾತವೃಕ್ಷವನ್ನೇ ? ಚೆನ್ನಾಯಿತು ? ಇದಕ್ಕೆ ಯಾವ ಪ್ರತ್ಯುತ್ತರವನ್ನು ಹೇಳಲಿ ! ಕೃಷ್ಣನಿಗೆ ಯಾವ ಭಾಗದಲ್ಲಿಯೂ ಪ್ರತಿಯಾಗಿ ಹೇಳತಕ್ಕುದಲ್ಲವೆಂದು ಆಗಾಗ ಗುರುಗಳು ಹೇಳುತ್ತಿರುವರು.

**ಶಚೀದೇವಿ**—ಆ ನಿಮ್ಮ ಗುರುಗಳಿಗೇನು ? ಛೆ ಅಮೂಲ್ಯವಾದ ವಸ್ತುವನ್ನು ಕೊಟ್ಟು ವಿಭವಗೌರವವನ್ನು ಕಳೆದುಕೊಳ್ಳುವವರು ನಾವಲ್ಲವೇ ?

**ಇಂದ್ರ**—ಪ್ರಿಯೇ ! ಹಾಗಲ್ಲ ; ಕೃಷ್ಣನು ಮಹಾ ಶೌರ್ಯಶಾಲಿ-ಅಲ್ಲದೆ....

**ಶಚೀದೇವಿ**—ನೀನು ಶೌರ್ಯಶಾಲಿಯಲ್ಲವೇನು ? ಅಲ್ಲದೆ ಅವನ ಶೌರ್ಯಕ್ಕೆ ಹೆದರಿ ಪಾರಿಜಾತವನ್ನು ಕೊಟ್ಟುಬಿಡುವುದೇನು ? ಹಾಗಾದರೆ ಆ ನಿನ್ನ ಕೈಯಲ್ಲಿರುವ ವಜ್ರಾಯುಧವನ್ನೂ ಅವನ ಕೈಗೆ ಕೊಟ್ಟು ಇಂದ್ರಪದವಿಯನ್ನೂ ಆ ಗೊಲ್ಲನಿಗೆ ಒಪ್ಪಿಸಿಬಿಡಬಹುದು ! ನಾವು ಎಲ್ಲಿಯಾದರೂ ಶಿವನಂತೆ ಭಿಕ್ಷಕ್ಕೆ ಹೋಗೋಣ.

**ನಾರದ**—ಭಲಾ ! ಶಚೀದೇವೀ ! ಚೆನ್ನಾಗಿ ಹೇಳಿದೆ.

**ಇಂದ್ರ**—ಪ್ರಿಯೇ ! ಕುಪಿತಳಾಗಬೇಡ ; ವೀರನು ತನ್ನ ಕೈಯಾಯುಧವನ್ನು ಪರರಿಗೆ ಕೊಡುವನೇ ! ಸಾಕು ಸುಮ್ಮನಿರು !

**ಶಚೀದೇವಿ**—ಮತ್ತೇನು ! ದೇವೇಂದ್ರನೆಂಬ ಲಕ್ಷ್ಯವಿಲ್ಲದೆ ಆ ಬಡಮಾನವನು, ನಿನ್ನನ್ನು ಪಾರಿಜಾತವನ್ನು ಕೇಳುವುದಂದರೇನು ? ಅವನು ಇಂದ್ರಪದವಿಯ ಲಾಂಛನಗಳಾದ ವಸ್ತುಗಳನ್ನು ಕೇಳಿದರೆ ನೀನು ಕೊಡಲು ಒಪ್ಪುವುದಂದರೇನು ? ಈದಿನ ಪಾರಿಜಾತವನ್ನು ಅಪೇಕ್ಷಿಸಿದ ಕೃಷ್ಣನು, ನಾಳೆ ನಿನಗೆ ಪ್ರಿಯವಾದ ಮತ್ತೆಯಾವುದನ್ನಾದರೂ ಬಯಸದಿರುವನೇ ? ನೀನು ಇಂತಹ ಧೀರನೂ, ಉದಾರನೂ, ಎಂದರಿತೇ ಆ ಮೋಸಗಾರನು ಉಪಾಯದಿಂದ ನಿನ್ನಿಂದ ಒಂದೊಂದನ್ನಾಗಿ ಅಮೌಲ್ಯವಸ್ತುಗಳನ್ನು ಕಸಿದುಕೊಳ್ಳಲು ಯತ್ನಿಸಿರುವನು. ಅಷ್ಟು ಆಲೋಚನೆತೋರದೆ ಪೂಜ್ಯರ ಮಾತಿಗೆ ಒಪ್ಪು

ವೆಯಲ್ಲವೇ! ನಿನಗೆ ಕೃಷ್ಣನಲ್ಲಿ ಅಷ್ಟು ಭಯಭಕ್ತಿಗಳಿದ್ದರೆ ಮತ್ತೆ ಯಾವ ವಸ್ತುವನ್ನಾದರೂ ಕೊಡಬಹುದು; ನನಗೆ ಪ್ರಿಯವಾದ ಪಾರಿಜಾತವನ್ನೆಂದಿಗೂ ಕೊಡಕೂಡದು. ಹಾಗೆ ಕೊಡುವುದಾದರೆ, ನಾನಿಲ್ಲಿ ಇರಲೊಲ್ಲೆನು. ನನಗೆ ತಪಸ್ಸಿಗೆ ಅನುಜ್ಞೆಯನ್ನು ಕೊಡಬೇಕು.

(ಕೈ ಮುಗಿದು ತಲೆವಾಗುವಳು.)

**ನಾರದ**—ಭಲಾ! ಇಂದ್ರಾಣೀ! ಬಹಳ ಚೆನ್ನಾಗಿ ಹೇಳಿದೆ! ಇದು ವೀರಪತ್ನಿಯಾಡತಕ್ಕ ಮಾತು. ಶಚೀದೇವೀ! ನೋಡಿದೆಯಾ! ಪತ್ನಿಯರ ಅದೃಷ್ಟದಂತೆ ಪತಿಗಳಿಗೆ ಸುಖದುಃಖಗಳೊದಗುವುವು. ಆ ಸತ್ಯಭಾಮೆಯು ಪುಣ್ಯವಂತೆ! ಅವಳ ಕೈಹಿಡಿದುದರಿಂದ ಗೊಲ್ಲನಾದರೂ ಕೃಷ್ಣನು ದೇವೇಂದ್ರನ ಪಾರಿಜಾತವನ್ನು ಸಾಧಿಸುವನು; ನಿನ್ನ ಕೈಹಿಡಿದ ಇಂದ್ರನು, ಇದ್ದ ಪಾರಿಜಾತವನ್ನು ಕಳೆದುಕೊಳ್ಳುವನು.

**ಶಚೀದೇವಿ**—ಅಯ್ಯೋ! ಪೂಜ್ಯರೇ! ಈ ಮಾತುಗಳು ನನ್ನ ಕಿವಿಗೆ ಶೂಲಪ್ರಾಯಗಳಾಗಿರುವುವು. ಆ ಕೃಷ್ಣನು ತನ್ನ ಕಾರ್ಯವನ್ನು ಸಾಧಿಸಿಯೇ ಬಿಡುವನೋ ಏನೋ! (ಇಂದ್ರನನ್ನು ನೋಡಿ) ಓಃ ಪ್ರಿಯಾ! ಇನ್ನು ವಿಳಂಬ ಮಾಡಲೇಕೆ? ರಣಧೀರನಾದರೆ ಐರಾವತವನ್ನೇರಿ ವಜ್ರಪಾಣಿಯಾಗಿ ಹೊರಟು ಆ ಗೊಲ್ಲನಿಗೆ ತಕ್ಕ ಶಿಕ್ಷೆಯನ್ನು ಮಾಡಿ ಪಾರಿಜಾತವನ್ನುಳಿಸು; ಇಲ್ಲವಾದರೆ ನನಗೆ ತಪಸ್ಸಿಗೆ ಅನುಜ್ಞೆಯನ್ನು ಕೊಡು.

**ಇಂದ್ರ**—ಪ್ರಿಯೇ! ನೀನು ಚಿಂತಿಸಬೇಡ. ಇದರಿಂದ ಆದುದಾಗಲಿ; ನಾನು ಪಾರಿಜಾತ ವೃಕ್ಷವನ್ನು ನಿಜವಾಗಿಯೂ ಕೃಷ್ಣನಿಗೆ ಕೊಡುವುದಿಲ್ಲ.

**ನಾರದ**—ಒಂದು ವೇಳೆ ಕೃಷ್ಣನು ಯುದ್ಧಕ್ಕೆ ಬಂದರೇನು ಮಾಡುವೆ?

**ಇಂದ್ರ**—ನಾನು ರಣಹೇಡಿಯಲ್ಲವಲ್ಲಾ!

**ನಾರದ**—ಭಲಾ! ವೀರ! ಭಲಾ ಶೂರ! ಭಲಾ! ಪ್ರತಾಪವೆಂದರೆ ಹೀಗಿರಬೇಕು. ಶಚೀದೇವೀ! ಕೇಳು, ನಿನ್ನ ಪತಿಯು ನಿನ್ನೆದುರಿನಲ್ಲಿ ಎಷ್ಟು

ಪೌರುಷವನ್ನು ಹೇಳಿಕೊಳ್ಳುತ್ತಿರುವನು! ಕಡೆಗೆ ಕೃಷ್ಣನು ಬಂದಾಗ ಈ ಶೌರ್ಯವು ಸ್ಥಿರವಾಗಿರುವುದೇ ನನಗನುಮಾನ.

**ಇಂದ್ರ**—ನಾರದರೇ! ಏನೆಂದು ಹೇಳಿದಿರಿ? ಕೃಷ್ಣನು ಬರಲಿ; ತ್ರಿಮೂರ್ತಿಗಳೇ ಬರಲಿ; ಈ ವೀರಪುರಂದರನು ಅಡಿದ ಮಾತಿಗೆ ತಪ್ಪಿ ನಡೆಯುವನೆಂದರಿತಿರೋ! ಸಾಕು. (ಶಚೀದೇವಿಯನ್ನು ನೋಡಿ) ಪ್ರಿಯೇ! ಪೌಲೋಮಿ, ನೀನು ಚಿಂತಿಸಬೇಡ, ಶಾಂತಳಾಗು. ಪಾರಿಜಾತವೃಕ್ಷಕ್ಕಾಗಿ ನನ್ನೆದುರಲ್ಲಿ ಬರತಕ್ಕ ವೀರನಾವನಿರುವನು!

ಕಂ|| ಹರಿಯಾದೊಡಮಾ ಸ್ಮರಸಂ |
ಹರನಾದೊಡಮಬ್ಜಪೀಠನಾದೊಡಮವನಂ ||
ಧುರದೊಳ್ ಗೆಲಿದಪೆನಲ್ಲದೆ |
ಸುರವರನೇ ಪಾರಿಜಾತತರುವಂ ಕುಡುವಂ? || ೧೩ ||

**ನಾರದ**—ಭಲಾ! ಇಂದ್ರಾ! ಬಹಳ ಸಂತೋಷ; ಹಾಗೆಯೇ ಮಾಡು. ಇಂದ್ರನೇ ಪಾರಿಜಾತ ತರುವನ್ನು ಕೊಡುವವನು? (ಆತ್ಮ) ಇಂದ್ರನೇ! (ಇಂದ್ರನು ಹೋಗುವನು.) (ಶಚೀದೇವಿಯನ್ನು ನೋಡಿ) ಇಂದ್ರಾಣೀ! ವೀರಪತ್ನಿಯೆಂದರೆ ನೀನೇ! ನಿನ್ನ ಮಾತುಗಳಿಂದ ನನಗೆ ಬಹಳ ಸಂತೋಷವಾಯಿತು. ಇನ್ನು ಹೊರಡುವೆನು.

**ಶಚೀದೇವಿ**—ಪೂಜ್ಯರೇ, ಸಂತೋಷ. ನಾನೂ ಸಹ ಸಖಿಯರೊಡನೆ ನಂದನವನಕ್ಕೆ ಹೋಗಿ ಆರ್ಯಪುತ್ರನ ವಿಜಯವನ್ನೆದುರುನೋಡುತ್ತಿರುವೆನು.

**ನಾರದ**—ಹಾಗೆಯೇ ಮಾಡು.

**ನಾರದ**—(ಆತ್ಮ) ನನ್ನ ಕಾರ್ಯವಾಯಿತು. ಇಂದ್ರನು ಕೆರಳಿದನು. ಇನ್ನು ನಾನೀಗಲೇ ಹೋಗಿ, ನಂದನವನಕ್ಕೆ ಬಂದಿರುವ ಶ್ರೀ ಕೃಷ್ಣನಿಗೆ ಈ ವಾರ್ತೆಯನ್ನು ತಿಳಿಸಿ, ಆತನನ್ನು ಮತ್ತಷ್ಟು ಕೆರಳಿಸಿ, ಮುಂದೆ ನಡೆಯುವ ವಿನೋದವನ್ನು ನೋಡಿ ಆನಂದಪಟ್ಟು ಇಂದ್ರನ ಅಹಂಕಾರ ಖಂಡನೆ ಮಾಡಿಸುವೆನು. (ಹೋಗುವನು.)

## ದೃಶ್ಯ ೩—ನಂದನವನದಲ್ಲಿ ಕೃಷ್ಣಸತ್ಯಭಾಮೆಯರಿರುವರು.

**ಕೃಷ್ಣ**—ಎಲೆ ಭಾಮೇ ! ನೋಡಿದೆಯಾ ! ಪಾರಿಜಾತವೃಕ್ಷವು ಮೃದುಪಲ್ಲವಗಳಿಂದಲೂ, ದಿಕ್ತಟಗಳನ್ನು ತುಂಬುವ ಪರಿಮಳವನ್ನು ಬೀರುತ್ತಿರುವ ಪುಷ್ಪಗಳಿಂದಲೂ ಎಷ್ಟು ಮನೋಹರವಾಗಿ ಶೋಭಿಸುತ್ತಿರುವುದು !

**ಸತ್ಯಭಾಮೆ**—ಆರ್ಯಪುತ್ರಾ ! ದೇವಲೋಕಕ್ಕೆ ಬಂದು ಈ ವೃಕ್ಷವನ್ನೂ ಈ ನಂದನವನವನ್ನೂ ನೋಡಿ ಆನಂದಪಡುವ ಸೌಭಾಗ್ಯವು ನಿನ್ನ ಅನುಗ್ರಹಕ್ಕೆ ಪಾತ್ರಳಾದುದರಿಂದಲ್ಲವೇ ನನಗೆ ಲಭಿಸಿದ್ದು ! ಆ ರುಕ್ಮಿಣಿಗೆ ಈ ಸಂತೋಷವು ಲಭಿಸದಿದ್ದ ಕಾರಣ ಈ ಭಾಮೆಯಲ್ಲಿಯೇ ನಿನಗೆ ಅತ್ಯಂತ ಪ್ರೇಮವಿದೆಯೆಂಬುದು ಈಗ ಚೆನ್ನಾಗಿ ವ್ಯಕ್ತವಾಯಿತು.

**ಕೃಷ್ಣ**—ನೀನು ನನ್ನ ಮೇಲೆ ಕೋಪಮಾಡಿಕೊಂಡಿದ್ದೆಯಲ್ಲವೇ !

**ಸತ್ಯಭಾಮೆ**—ಆ ರೀತಿ ಕುಪಿತಳಾಗಿದ್ದುದರಿಂದಲೇ ಅಲ್ಲವೇ ಈ ಸಂತೋಷವು ಒದಗಿದ್ದು.

**ನಾರದ**—(ಪ್ರವೇಶಿಸುವನು.)

**ಕೃಷ್ಣ**—ಓಹೋ ! ಮಹರ್ಷಿಗಳು ಅತಿತ್ವರೆಯಿಂದ ಬಂದಂತೆ ಕಾಣುವಿರಿ ! ದೇವೇಂದ್ರನು ಏನನ್ನು ಹೇಳಿದನು ?

**ನಾರದ**—ಕೃಷ್ಣಾ, ಹೇಳುವುದಿನ್ನೇನು ! ನಾನು ಮೊದಲೇ ಹೇಳಿರಲಿಲ್ಲವೇ ! ಅವನು ಇಂದ್ರಪದವಿಯಲ್ಲಿದ್ದುಕೊಂಡು, ಮಾನವನಾದ ನಿನ್ನನ್ನು ಗಣನೆಗಾದರೂ ತರುವನೇ ? ತನ್ನ ಪತ್ನಿಗೆ ಪ್ರಿಯವಾದ ವಸ್ತುವನ್ನು ಕೊಡುವನೇ ! ನೀನು ನಂದನವನಕ್ಕೆ ಬಂದಿರುವ ವಾರ್ತೆಯನ್ನು ಕೇಳಿ, ಕಿಡಿಕಿಡಿಯಾಗಿ ವಜ್ರಾಯುಧವನ್ನು ಹಿಡಿದು ಯುದ್ಧಕ್ಕೆ ಹೊರಟಿರುವನು. ಆತನು ಇಷ್ಟರಲ್ಲಿಯೇ ಇಲ್ಲಿಗೆ ಬರಬಹುದು.

**ಕೃಷ್ಣ**—ಓಹೋ ! ಇಂದ್ರನು ಇಷ್ಟು ಕೃತಘ್ನನಾದನೇ ! ಇರಲಿ. ಸಂತೋಷ;

ಅವನ ನಡತೆಗೆ ತಕ್ಕ ಫಲವನ್ನು ಕೊಟ್ಟು ಹೊರಡುವೆನು. ಇದೋ ಇನ್ನು ನಾನೇ ಅವನನ್ನು ಈ ಶಂಖನಾದದಿಂದ ಯುದ್ಧಕ್ಕೆ ಕರೆಯುವೆನು.
(ಶಂಖವನ್ನೂದುವನು.)

**ಇಂದ್ರ**—(ದೂರದಲ್ಲಿ) **ಕಂ||** ತ್ರಿದಶೇಂದ್ರನ ಬಲಮರಿಯದೆ |
ಕದನಕೆ ಸನ್ನದ್ಧನಾಗಿ ಶಂಖಾರವದಿಂ ||
ಮದದಿಂ ಕರೆದಿರಲೀಪರಿ |
ಬೆದರುವೆನೇಂ ಮರ್ತ್ಯನಾರ್ಭಟಕ್ಕಮರೇಂದ್ರಂ ||೧೪||

**ಕೃಷ್ಣ**—ಆಹಾ! ದೇವೇಂದ್ರನು ಈ ವಿಧವಾಗಿ ನನ್ನನ್ನು ಮೂದಲಿಸುವುದು ಪರಮಾಶ್ಚರ್ಯ!

**ಕಂ||** ಬಲಸೂದನ ನೀಂ ಸಮರದೆ |
ಬಲಮಳಿದಪಕೀರ್ತಿಯಂ ಮಹಾ ದುರ್ಯಶಮಂ ||
ಸಲೆಪೊರ್ದಲ್ ಬಂದಿರ್ದಪೆ |
ಬಲಭದ್ರಾನುಜನ ಕೆಣಕಿ ಪಿರಿದುಂ ಮದದಿಂ ||೧೫||

ದೇವನಾಥಾ! ಯುಕ್ತಾಯುಕ್ತವನ್ನರಿಯದೆ ವರ್ತಿಸಿದ ನಿನಗೀಗಲೇ ತಕ್ಕ ಫಲವಾಗುವುದು, ಬಾ. (ಸತ್ಯಭಾಮೆಯನ್ನು ನೋಡಿ) ಭಾಮೇ! ನೀನಿಲ್ಲಿಯೇ ಇರು. ನಾನೀಗಲೇ ಆ ದೇವೇಂದ್ರನ ಮದವನ್ನಡಗಿಸಿ ಬರುವೆನು.
(ಹೋಗುವನು.)

## ದೃಶ್ಯ ೪—ನಂದನವನದ ಮತ್ತೊಂದು ಭಾಗ

(ಸತ್ಯಭಾಮೆಯು ಲತಾಮಂಟಪದಲ್ಲಿರುವಳು.)

**ಶಚೀದೇವಿ**—(ಪ್ರವೇಶಿಸಿ) ಇವಳಲ್ಲವೇ ಸತ್ಯಭಾಮೆಯು! ಇವಳಿಂದಲೇ ಇಷ್ಟು ಅನರ್ಥವುಂಟಾದುದು; (ಮುಂದೆ ನೋಡಿ) ಇರಲಿ; ನನ್ನ ಕಾಂತನೇನು ಸಾಮಾನ್ಯನಲ್ಲ. ಆ ಕೃಷ್ಣನನ್ನು ಧ್ವಂಸ ಮಾಡುವನು. ಆಗ ಇವಳ ದುರಾಶೆಗೆ ತಕ್ಕ ಫಲವಾಗುವುದು.

**ಸತ್ಯಭಾಮೆ**—(ಪ್ರವೇಶಿಸಿ) ಅಕ್ಕಾ ಕುಶಲವೇ? ಏನು! ಪಾಪ! ಬಹಳ ಕಾತರಳಾದಂತೆ ಕಾಣುವೆಯಲ್ಲಾ ?

**ಶಚೀದೇವಿ**—ನಾನು ಕಾತರಳಾಗಲು ಕಾರಣವಿಲ್ಲ; ಬಲಶಾಲಿಯಾದ ಅಮರ್ತ್ಯಾಧೀಶನ ಕೈವಿಡಿದ ನನಗೇತಕ್ಕೆ ಕಾತರ? ಮರ್ತ್ಯನ ಕೈವಿಡಿದ ನಿನಗಲ್ಲವೇ ಯುದ್ಧಕಾಲದಲ್ಲಿ ಮಾಂಗಲ್ಯಸಂಶಯವು!

**ಸತ್ಯಭಾಮೆ**—ಲೋಕೇಶ್ವರನ ಕೈವಿಡಿದ ನನಗೆ ಆ ಭೀತಿಯು ಸ್ವಪ್ನದಲ್ಲಿಯೂ ಇಲ್ಲ. ಈಗ ಜಯಪರಾಜಯಗಳು ಕ್ಷಿಪ್ರದಲ್ಲಿಯೇ ಕಾಣುವುವಲ್ಲವೇ ?

**ಶಚೀದೇವಿ**—ಆಹಾ! ನಿನ್ನ ಪತಿಯ ಲೋಕೇಶ್ವರತ್ವವನ್ನು ನೀನೇ ಹೊಗಳಬೇಕು. ಎಲೌ! ಭಾಮೇ! ನನ್ನ ಪತಿಗೆ ಸಿಡಿಲೇ ಆಯುಧವು. ನಿನ್ನ ಪತಿಗೆ ಮರದಗದೆಯು. ನನ್ನ ಪತಿಯು ಐರಾವತವನ್ನು ಏರುವನು. ನಿನ್ನ ಪತಿಯು ಮುದಿಹದ್ದನ್ನೇರುವನು. ನನ್ನ ಕಾಂತನು ಸ್ವರ್ಗಪಾಲಕನು. ನಿನ್ನ ಗಂಡನು ಗೋಪಾಲಕನು. ಇದೇ ವ್ಯತ್ಯಾಸವು. ಹೀಗಿರುವಲ್ಲಿ ಜಯಪರಾಜಯಗಳು ಯಾರಯಾರಿಗೆಂಬುದು ಸ್ಪಷ್ಟವಾಗಿಯೇ ಇರುವುದು.

**ಸತ್ಯಭಾಮೆ**—ಅದು ಕ್ಷಿಪ್ರದಲ್ಲಿಯೇ ಕಾಣುವುದು. ನನ್ನ ಪ್ರಿಯನ ಪರಾಕ್ರಮದ ರುಚಿಯು ನಿನ್ನ ಪ್ರಿಯನಿಗೆ ಚೆನ್ನಾಗಿ ಗೊತ್ತಾಗುವುದು.

**ಶಚೀದೇವಿ**—ಎಲೌ ಭಾಮೇ! ಸುಮ್ಮನೆ ಏತಕ್ಕೆ ಡಂಭವನ್ನು ಹೇಳಿಕೊಳ್ಳುವೆ? ಯುಕ್ತಾಯುಕ್ತ ವಿವೇಚನೆಯಿಲ್ಲದೆ ದೇವೇಂದ್ರನ ಮೇಲೆ ಯುದ್ಧಕ್ಕೆ ಬಂದ ನಿನ್ನ ಗಂಡನಿಗೆ ಜಯವಾಗುವುದೆಂದರಿತೆಯೋ ?

**ಸತ್ಯಭಾಮೆ**—ಅಯ್ಯೋ! ಪಾಪ! ನಿನ್ನ ಗಂಡನು ಯುಕ್ತಾಯುಕ್ತವನ್ನು ಚೆನ್ನಾಗಿ ತಿಳಿದೇ ಮೈಯೆಲ್ಲವೂ ಕಣ್ಣಾಗಿ ವಿವೇಕಶಾಲಿಯೆನಿಸಿರುವುದು! ಅಂತಹ ಪರಾಕ್ರಮಿಗೆ ಜಯವಾಗದೆ ಇದ್ದೀತೇ ?

**ಶಚೀದೇವಿ**—ಹಂಗಿಸುವೆಯಾ ಭಾಮೇ! ನನ್ನ ಪ್ರಿಯನ ವಜ್ರಾಯುಧ

ಘಾತದಿಂದ ಕುಲಪರ್ವತಗಳೂ ಸಹ ಅದಿರಿ ಬಿದರಿಹೋದುವೆಂಬು ದನ್ನರಿಯೆಯೋ ?

**ಸತ್ಯಭಾಮೆ**—ಓಹೋ ! ಬಲ್ಲೆನು. ಅದರಿಂದಲೇ ನಿನ್ನ ಗಂಡನಿಗೆ ಕುಲ ಗೋತ್ರವೈರಿಯೆಂಬ ಹೆಸರು ನ್ಯಾಯವಾಗಿರುವುದು. ಆದರೆ ನನ್ನ ಪ್ರಿಯನು ಕುಲಗೋತ್ರಪಾಲಕನಾಗಿರುವನು. ಇವರಿಬ್ಬರ ಶಕ್ತಿಸಾಹಸ ಗಳೂ ಈಗ ವ್ಯಕ್ತವಾಗುವವು.

**ಶಚೀದೇವಿ**—ನಿಜ ! ವ್ಯಕ್ತವಾಗುವವೋ ! ದೇವೇಂದ್ರನನ್ನು ಕೆಣಕಿದ ಆ ದುರಹಂಕಾರಿಗೆ ತಕ್ಕ ಶಿಕ್ಷೆಯಾಗುವುದೋ !

**ಸತ್ಯಭಾಮೆ**—ದುರಹಂಕಾರಿಗೆ ತಕ್ಕ ಶಿಕ್ಷೆಯಾಗುವುದೇನೋ ನಿಶ್ಚಯ ! ಆದರೆ ತನ್ನ ಇಂದ್ರಪದವಿಯು ಶ್ರೀಕೃಷ್ಣಪರಮಾತ್ಮನ ಅನುಗ್ರಹ ದಿಂದಲೇ ಉಂಟಾದುದೆಂಬುದನ್ನು ಮರೆತ ನಿನ್ನಗಂಡನು ದುರಹಂಕಾ ರಿಯೋ, ಅಥವಾ ಆತನಿಗೆ ಸಮಯದಲ್ಲಿ ಸಹಾಯಮಾಡಿ ಜಯವನ್ನುಂಟು ಮಾಡಿದ ನನ್ನ ಪ್ರಿಯನು ದುರಹಂಕಾರಿಯೋ ನೀನೇ ಆಲೋಚಿಸು

**ಶಚೀದೇವಿ**—ನೆಪಮಾತ್ರಕ್ಕೆ ಗೌರವಿಸಿ ಕೃಷ್ಣನನ್ನು ನನ್ನ ಪ್ರಿಯನು ಆಗಾಗ ಈ ದೇವಲೋಕಕ್ಕೆ ಕರೆಯಿಸಿಕೊಳ್ಳುತ್ತಿದ್ದುದರಿಂದ ನಿನಗೂ ನಿನ್ನ ಗಂಡನಿಗೂ ಇಂತಹ ದುರಹಂಭಾವವು ಜನಿಸಿತಲ್ಲವೇ ? ಈಗ ನಿನ್ನ ಗಂಡನ ಗತಿಯೇನಾಗುವುದೋ ನಿನ್ನ ದುರಾಶೆಯ ಪರಿಣಾಮ ವೇನಾಗುವುದೋ ನೀನೇ ನೋಡುವೆ.

**ಸತ್ಯಭಾಮೆ**—(ಪಕ್ಕದಲ್ಲಿ ನೋಡಿ) ಅದೋ ! ಅದೋ ! ನೋಡಿದೆನು. ನೀನೂ ನೋಡು, ಚೆನ್ನಾಗಿ ನೋಡು ; ನಿಮ್ಮ ಅಮರಸೈನ್ಯವೆಲ್ಲವೂ ನಾಶವಾಗಿ ದೇವೇಂದ್ರನು ಆರ್ಯಪುತ್ರನೊಡನೆ ಮಲ್ಲಯುದ್ಧ ಮಾಡುತ್ತಿರುವನು. ಕ್ಷಿಪ್ರದಲ್ಲಿಯೇ ಫಲಿತಾಂಶವು ಕಾಣುವುದು. ಹೀಗೆ ಬಾ. (ಹೋಗುವರು.)

## ದೃಶ್ಯ ೫—ನಂದನವನಪ್ರಾಂತ್ಯ

(ಇಂದ್ರನೂ ಶ್ರೀಕೃಷ್ಣನೂ ಮಲ್ಲಯುದ್ಧ ಮಾಡುತ್ತ ಪ್ರವೇಶಿಸುವರು.)

**ನಾರದ**—(ಪ್ರವೇಶಿಸಿ) ದೇವೇಂದ್ರಾ! ಭಲಾ ಸಾಹಸಿಯೆಂದರೆ ನೀನೇ!

(ಕೃಷ್ಣನು ಮಲ್ಲಯುದ್ಧಮಾಡಿ ಇಂದ್ರನನ್ನು ಸೋಲಿಸಿ ಕೆಡಹುವನು.)

**ಈಶ್ವರ**—(ಪ್ರತ್ಯಕ್ಷನಾಗಿ) **ಕಂ||** ಬಿಡು ಬಿಡು ದೈತ್ಯಾಂತಕ ನೀಂ |
ಬಿಡೌಜಸನಂ ಮನ್ನಿಸಿಂದು ಕನಿಕರದಿಂದಂ ||
ಪಡೆದಪಜಯಮಂ ಜ್ಞಾನಂ |
ಬಿಡೆದಂ ನೀಂ ಲೋಕನಾಥನೆಂಬುದನರಿತಂ ||

ಶ್ರೀ ಕೃಷ್ಣಪರಮಾತ್ಮಾ! ನಿನ್ನ ಕೃಪಾಕಟಾಕ್ಷದಿಂದ ಸ್ಥಿರವಾದ ಇಂದ್ರಪದವಿಯಿಂದೊಪ್ಪುವ ದೇವೇಂದ್ರದನನ್ನು ನೀನು ನೋಯಿಸ ಬಾರದು; ನಿನ್ನ ನಿಜವನ್ನರಿತಿದ್ದರೂ, ದೇವೇಂದ್ರನು ಪದವೀ ಮದ ದಿಂದಲೂ, ಸ್ತ್ರೀವ್ಯಾಮೋಹದಿಂದಲೂ, ಆಶಾಪಾಶದಿಂದಲೂ, ಬದ್ಧ ನಾಗಿ ಅಜ್ಞಾನಾಂಧಕಾರದಲ್ಲಿ ಸಿಕ್ಕಿ ನಿನ್ನ ಉಪಕಾರವನ್ನು ಮರೆತು ನಿನ್ನೊಡನೆ ಕಲಹ ಮಾಡಿದನು. ಆತನನ್ನು ಮನ್ನಿಸಿ ಕಾಪಾಡು. ನೀನು ಯಾರು? ನಾನಲ್ಲವೇ! ನಾನು ನೀನಲ್ಲವೇ? ನನ್ನ ಭಕ್ತನಾದವನು ನಿನ್ನ ಭಕ್ತನಲ್ಲವೇ! ಸ್ಥಿತಿಲಯ ತತ್ವಗಳನ್ನು ವಹಿಸಿರುವ ನಾವುಗಳು ಆಕಾರದಿಂದ ಭಿನ್ನರಾಗಿ ಕಂಡರೂ ತತ್ವತಃ ಒಬ್ಬರೇ ಅಲ್ಲವೇ! ಆದುದ ರಿಂದ ನನಗೀತನಲ್ಲಿ ಉಂಟಾದ ಕರುಣೆಯು ನಿನಗೂ ಉಂಟಾಗಲಿ;

**ಕೃಷ್ಣ**—(ವಂದಿಸಿ) ಮಹಾದೇವನೇ! ನಿನ್ನ ಸಾಕ್ಷಾತ್ಕಾರದಿಂದಲೂ ದಯಾ ಪರಿಪೂರ್ಣವಾದ ಮೃದುವಾಕ್ಕುಗಳಿಂದಲೂ ನನಗೆ ಬಹಳ ಸಂತೋಷ ವಾಯಿತು. (ಇಂದ್ರನನ್ನು ನೋಡಿ) ದೇವೇಂದ್ರಾ! ಚಿಂತಿಸಬೇಡ. ಮಹಾ ದೇವನು ನಿನ್ನನ್ನನುಗ್ರಹಿಸಿರುವನು.

**ಇಂದ್ರ**—**ಶ್ರೀ** ಪೂಜ್ಯನಾದ ಪರಮೇಶ್ವರನಿಗೆ ನಮಸ್ಕರಿಸುವೆನು.(ವಂದಿಸುವನು.)

**ಈಶ್ವರ**—ದೇವನಾಥಾ! ನಿನಗೆ ಮಂಗಳವಾಗಲಿ. ಶ್ರೀಕೃಷ್ಣನನ್ನು ಯಾರೆಂದರಿತೆ? ಈತನು ನೀನು ಭಾವಿಸಿದ್ದಂತೆ ಸಾಮಾನ್ಯ ಮಾನವನಲ್ಲ. ಲೋಕರಕ್ಷಾಕರನಾದ ಶ್ರೀಮನ್ನಾರಾಯಣನು. ಆತನ ಕ್ಷಮೆಯನ್ನು ಬೇಡಿ ಶ್ರೇಯಸ್ಸನ್ನು ಪಡೆ.

**ಇಂದ್ರ**—ಮಹಾದೇವನ ಅಪ್ಪಣೆಯಂತೆ ಆಗಲಿ. (ಈಶ್ವರನು ಅಂತರ್ಧಾನನಾಗುವನು.) (ಶ್ರೀಕೃಷ್ಣನನ್ನು ನೋಡಿ) ಮಹಾನುಭಾವನಾದ ಶ್ರೀಕೃಷ್ಣ ಪರಮಾತ್ಮನೇ! ಅಜ್ಞಾನದಿಂದ ನಾನು ಮಾಡಿದ ಅಪರಾಧವನ್ನು ಮನ್ನಿಸಿ ಕಾಪಾಡು. ಪಾರಿಜಾತ ವೃಕ್ಷ ಮಾತ್ರವಲ್ಲದೆ ಈ ನನ್ನ ಸಕಲವೈಭವವೂ ನಿನ್ನದಾಗಿಯೇ ಇರುವುದು, ನಿನ್ನ ಕೃಪೆಯಿಲ್ಲದಿದ್ದಲ್ಲಿ ನನಗೆ ಈ ಪದವಿಯು ಸ್ಥಿರವಾಗುತ್ತಿರಲಿಲ್ಲ. ಇನ್ನು ನೀನು ಇಷ್ಟ ಬಂದಂತೆ ಬೇಕಾದುದನ್ನು ಸ್ವೀಕರಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕಾಗಿ ಬೇಡುವೆನು.

**ನಾರದ**—ಕೃಷ್ಣಪರಮಾತ್ಮಾ! ದೇವೇಂದ್ರನ ಇಷ್ಟದಂತೆ ಮಾಡು. (ಇಂದ್ರನನ್ನು ನೋಡಿ) ದೇವನಾಥಾ! ನಿನಗಿಂತಲೂ ಗುಣದಲ್ಲಿಯೂ ವಿಕ್ರಮದಲ್ಲಿಯೂ ಅತಿಶಯನೆನಿಸಿದವನು ಈತನೇ. ನೋಡಿದೆಯಷ್ಟೆ!

**ಇಂದ್ರ**—ಪೂಜ್ಯರೇ ವಿಭವಮತ್ತನಾಗಿ, ಅಜ್ಞಾನಕ್ಕೆ ಸಿಕ್ಕಿ ನಾನು, ಶ್ರೀಕೃಷ್ಣಪರಮಾತ್ಮನು ಶ್ರೀಮನ್ನಾರಾಯಣನೆಂಬುದನ್ನು ಮರೆತು, ತಮ್ಮೊಡನೆ ಅಹಂಕಾರದಿಂದ ಮಾತನಾಡಿದೆನು. ನನ್ನ ಅಪರಾಧವನ್ನು ಮನ್ನಿಸಬೇಕು. (ಕೈ ಮುಗಿಯುವನು)

**ನಾರದ**—ಮಹಾದೇವನೂ ಶ್ರೀಕೃಷ್ಣಪರಮಾತ್ಮನೂ ಸಹ ನಿನ್ನನ್ನು ಅನುಗ್ರಹಿಸಿರುವರಷ್ಟೆ! ಇನ್ನು ಚಿಂತೆಯನ್ನು ಬಿಡು.

**ಕೃಷ್ಣ**—ದೇವೇಂದ್ರಾ! ಪುರುಷನು ಎಂತಹ ಪದವಿಯಲ್ಲಿದ್ದರೂ ದೈವವನ್ನೂ ಗುರುವನ್ನೂ ಉಪಕಾರಮಾಡಿದವರನ್ನೂ ಮರೆಯಬಾರದೆಂಬುದು ನಿನಗೆ ತೋರಿತಲ್ಲವೇ! ಎಷ್ಟು ಐಶ್ವರ್ಯವೂ, ವೈಭವವೂ, ಪದವಿಯೂ

ಇದ್ದರೂ, ತಾನು ಮಾಡುವ ಕಾರ್ಯಗಳು ದೈವತೃಪ್ತಿಕರವಾಗಿಯೂ ಗುರುಜನರಿಗೆ ಸಮ್ಮತವಾಗಿಯೂ ಇರುವಂತೆ ಮಾಡಿ ಇವರಲ್ಲಿ ಕೃತಜ್ಞತೆ ಯುಳ್ಳವನಾಗಿರಬೇಕು. ಇನ್ನು ನೀನು ಚಿಂತೆಯನ್ನು ಬಿಡು. ಪಾರಿಜಾತ ವೃಕ್ಷವನ್ನು ನಮ್ಮ ದ್ವಾರಕಾನಗರಕ್ಕೆ ಕಳುಹಿಸು. ನಾನು ಭಾಮೆ ಯೊಡನೆ ಭೂಲೋಕಕ್ಕೆ ಪ್ರಯಾಣಮಾಡುವೆನು.

**ಇಂದ್ರ**—ನಿನ್ನಿಷ್ಟದಂತೆ ಆಗಲಿ. ಈ ದಿನ ನಮ್ಮ ಮಂದಿರದಲ್ಲಿ ನೀವು ಆತಿಥ್ಯ ವನ್ನು ಸ್ವೀಕರಿಸಿ ಹೊರಡಬೇಕಾಗಿ ಬೇಡುವೆನು.

**ಕೃಷ್ಣ**—ಆಗಬಹುದು. (ಹೋಗುವರು.)

## ಸ್ಥಾನ ೧೧ ಅರಮನೆಯಲ್ಲಿ ದೇವೇಂದ್ರನ ಪ್ರವೇಶ.

**ದೇವೇಂದ್ರ—ಹಿಂ** ಶ್ರೀಕೃಷ್ಣಪರಮಾತ್ಮನು ಲೋಕನಾಯಕನೂ, ಸರ್ವ ಶಕ್ತನೂ ಎಂಬುದನ್ನರಿತಿದ್ದ ನಾನು, ಅಜ್ಞಾನದಿಂದ ನನ್ನ ಪತ್ನಿಯ ಮಾತನ್ನು ಕೇಳಿ ಪಾರಿಜಾತ ವೃಕ್ಷವನ್ನಾತನಿಗೆ ಕೊಡಲಿಷ್ಟಪಡದೆ ಆತನೊಡನೆ ಯುದ್ಧಮಾಡಿ ಪರಾಜಯವನ್ನೂ ಅಪಮಾನವನ್ನೂ ಪಡೆದೆನು. ವಿವೇಚನೆಯಿಲ್ಲದೆ ಸ್ತ್ರೀವ್ಯಾಮೋಹದಿಂದ ಪತ್ನಿಯ ಮಾತನ್ನು ಕೇಳಿ ಯುಕ್ತಾಯುಕ್ತವನ್ನರಿಯದೆ ದುಡುಕಿದುದಕ್ಕೆ ಇದೇ ಫಲವು. ಆದರೆ ಶಿವಪೂಜಾಪ್ರಸಾದವಾಗಿ ತನಗೆ ನಾನು ಕೊಟ್ಟ ಪುಷ್ಪವನ್ನು ಶ್ರೀಕೃಷ್ಣನಿಂದ ರುಕ್ಮಿಣೀದೇವಿಗೆ ಕೊಡಿಸಿ ಸವತಿಯರಲ್ಲಿ ಕಲಹವನ್ನು ಹುಟ್ಟಿಸಿದುದಲ್ಲದೆ, ಇಲ್ಲಿ ಬಂದು ನನ್ನ ಪತ್ನಿ ಯಾದ ಶಚೀದೇವಿಗೆ ಬೋಧನೆಮಾಡಿ, ಪಾರಿಜಾತ ವೃಕ್ಷವನ್ನು ಕೊಡ ಕೂಡದೆಂದು ಹಠಹಿಡಿಯುವಂತೆ ಮಾಡಿದ ಆ ನಾರದಮುನಿಯೇ ಈ ಅನರ್ಥವೆಲ್ಲಕ್ಕೂ ಮೂಲಕಾರಣನೆಂದು ವಿಚಾರದಿಂದ ವ್ಯಕ್ತವಾ ಯಿತು. ಅರಿಷಡ್ವರ್ಗಗಳನ್ನು ದೂರಮಾಡಿ ಲೋಕಸಂಚಾರದಲ್ಲಿರುವ ಈ ಮುನಿಗೆ ಈ ಕುಹಕಗಳೂ ಕಲಹಗಳೂ ಈರ್ಷೆಗಳೂ ಏತಕ್ಕೆ ?

ಈತನು ನನ್ನ ಪತ್ನಿಗೆ ಬೋಧನೆಮಾಡದೆ ಶ್ರೀಕೃಷ್ಣನ ಸಂದೇಶವನ್ನು ನನ್ನೊಡನೆ ಹೇಳಿದ್ದರೆ, ನಾನೇ ಸಂತೋಷದಿಂದ ವಿರಸವಿಲ್ಲದೆ ಪಾರಿಜಾತ ವನ್ನಾತನಿಗೆ ಒಪ್ಪಿಸುತ್ತಿದ್ದೆನಲ್ಲಾ ! ಈ ನಾರದನು ನನಗೆ ಮಾಡಿದ ಅವಮಾನದ ಹೊಟ್ಟೆಯ ಉರಿಯನ್ನು ನಾನು ಹೇಗೆ ತೀರಿಸಿಕೊಳ್ಳಲಿ ! ಏನುಮಾಡಲಿ........(ಆಲೋಚಿಸಿ) ಯೋಗಿಗಳನ್ನು ಪಾಶಕ್ಕೆ ಸಿಕ್ಕಿಸಿ ಕೊಳ್ಳಬೇಕಾದರೆ ಸಾಮಾನ್ಯವಲ್ಲ. ಉಗ್ರತಪದಲ್ಲಿ ಲೀನನಾಗಿದ್ದ ಮಹಾ ದೇವನನ್ನು ಚಪಲಚಿತ್ತನನ್ನಾಗಿ ಮಾಡಿದ ಆ ಮನ್ಮಥನೊಬ್ಬನೇ ಈ ಕಾರ್ಯವಮಾಡಲು ಶಕ್ತನು. ಆದ್ದರಿಂದ ಆ ಕುಸುಮಾಯುಧನೊಡನೆ ಯೋಚಿಸಿ, ನಾರದನಿಗೆ ತಕ್ಕ ಪ್ರತಿಕ್ರಿಯೆಮಾಡಲು ಯತ್ನಿಸುವೆನು. ಯಾರಲ್ಲಿ ? ಮನ್ಮಥನನ್ನು ಕರೆ.

**ಮನ್ಮಥ**—(ಪ್ರವೇಶಿಸಿ) ಇಗೋ ಮಹೇಂದ್ರನಿಗೆ ವಂದಿಸುವೆನು

**ಇಂದ್ರ**—ಮದನಾ ! ಹೀಗೆ ಬಾ, ನಿನ್ನಿಂದ ಒಂದು ಮಹತ್ಕಾರ್ಯವಾಗ ಬೇಕಾಗಿರುವುದು.

**ಮನ್ಮಥ**—ಅದೇನು ?

**ಇಂದ್ರ**—ಏನೆಂದರೆ, ನೀನು ಈಗ ಒಬ್ಬ ಯೋಗಿಯನ್ನು ಸಂಸಾರಾಪೇಕ್ಷಿ ಯಾಗುವಂತೆ ಮಾಡಬೇಕಾಗಿದೆ.

**ಮನ್ಮಥ**—ಇದು ಯಾವ ಮಹತ್ಕಾರ್ಯ! ಪರಮೇಶ್ವರನನ್ನೇ ತಪಸ್ಸಿನಿಂದ ಪರಾಙ್ಮುಖನನ್ನಾಗಿ ಮಾಡಿದೆನು. ಕಡೆಗೆ ಆ ಶಂಕರನು ನನ್ನ ಶರೀರ ವನ್ನು ಸುಟ್ಟರೂ ಬಿಡದೆ, ಆ ಕಪಾಲಿಯ ಅರ್ಧದೇಹವನ್ನೇ ಹೆಣ್ಣಾಗು ವಂತೆ ಮಾಡಿದೆನು. ಇನ್ನು ಸಾಮಾನ್ಯ ಯೋಗಿಗಳನ್ನು ಭ್ರಾಂತಿಪಡಿಸು ವುದು ನನಗೊಂದತಿಶಯ ಕಾರ್ಯವೇ ! ಆ ಯೋಗಿ ಯಾರು ಹೇಳು. ನನ್ನ ಸಾಹಸವನ್ನು ತೋರಿಸುವೆನು.

**ಇಂದ್ರ**—ಮತ್ತೆಯಾರು ! ಪಾರಿಜಾತದ ನೆಪದಿಂದ ನನಗೆ ಅವಮಾನವನ್ನೂ ಅಪಜಯವನ್ನೂ ಉಂಟುಮಾಡಿದ ಆ ನಾರದನು.

**ಮನ್ಮಥ**—ಓಹೋ! ನಾರದನು ಮಹಾಯೋಗಿಯು! ಆತನು ನನ್ನ ಬಾಣಕ್ಕೆ ಸಿಕ್ಕುವನೇ? ನನಗೆ ಸಾಧ್ಯವಾಗಿ ತೋರಲಿಲ್ಲ. (ಆಲೋಚಿಸಿ) ಆಗಲಿ. ನಿನಗವಮಾನಮಾಡಿದ್ದಲ್ಲಿ ನಾನಾತನನ್ನು ಹೇಗಾದರೂ ವಿಚಾರಿಸಿಕೊಳ್ಳಲೇಬೇಕು. ಮಹೇಂದ್ರಾ! ನೀನಾಲೋಚಿಸಬೇಡ.

**ಇಂದ್ರ**—ಇದೋ! ರಂಭಾ ಮೇನಕಾ ತಿಲೋತ್ತಮಾದಿ ಸುಂದರಿಯರೊಡನೆ ಹೊರಟು ಆ ಮುನಿಯಿರುವ ಸ್ಥಳವನ್ನು ಸೇರಿ, ನಿನ್ನ ಚಾತುರ್ಯದಿಂದ ಆತನನ್ನು ನಿನ್ನ ಪಾಶಕ್ಕೆ ಸಿಕ್ಕಿಸಿಕೊಂಡು ಲೋಕದ ಜನರು ಆತನನ್ನು ನೋಡಿ ನಗುವಂತೆ ಮಾಡಬೇಕು.

**ಮನ್ಮಥ**—ನಗುವಂತೆ ಮಾಡುವೆನೋ! ನಾರದನೆಂಬ ಹೆಸರನ್ನೆತ್ತಿದರೆ ಪರಿಹಾಸ್ಯಮಾಡಿ ವಿನೋದದಿಂದ ಗೊಳ್.... ಳೆಂದು ನಕ್ಕು ಉರುಳಾಡುವಂತೆ ಮಾಡುವೆನೋ ನೋಡುತ್ತಿರು! ೩೨

**ಇಂದ್ರ**—ಬಹಳ ಸಂತೋಷ ಹೊರಡು. (ಹೋಗುವರು.)

## ದ್ವಿತೀಯಾಂಕಂ ಸಂಪೂರ್ಣಂ

---

# ತೃತೀಯಾಂಕಂ

---

## ದೃಶ್ಯ ೧ ನದೀತೀರದಲ್ಲಿ ನಾರದನ ಪ್ರವೇಶ.

**ನಾರದ—** ಕಂ|| ಭುವನೈಕಪಾಲ ವಿಕಸಿತ |
**೩೩** ಕುವಲಯದಳನೀಲ ಸಕಲಗುಣಸುವಿಶಾಲಾ ||
ದಿವಿಜಾರಿ ವಂಶಕಾಲಾ |
ಲೀಲಾಮಯ ವಿಜಯಿಸಬ್ಧಿಕನ್ಯಾಲೋಲಾ || ೧೭ ||

ನನ್ನ ಇಷ್ಟದಂತೆ ದೇವೇಂದ್ರನ ಅಹಂಕಾರಕ್ಕೆ ತಕ್ಕ ಶಿಕ್ಷೆಯನ್ನು ಮಾಡಿಸಿದುದಾಯಿತು. ಶ್ರೀಕೃಷ್ಣಪರಮಾತ್ಮನಿಗೆ ಪಾರಿಜಾತವೃಕ್ಷವು ದೊರೆಯಿತು. ಇನ್ನು ದ್ವಾರಕೆಗೆ ಹೋಗಿ ಲಬ್ಧಮನೋರಥರಾದ ಸತ್ಯಭಾಮಾ ಮುಕುಂದರನ್ನಭಿನಂದಿಸುವೆನು, (ಮೇಲೆ ನೋಡಿ) ಓಹೋ! ಮಧ್ಯಾಹ್ನವಾಯಿತು. ಈ ಮುಂದೆ ಕಾಣುವ ನದಿಯಲ್ಲಿ ಮಾಧ್ಯಾಹ್ನಿಕವನ್ನು ತೀರಿಸಿಕೊಂಡು ಮುಂದೆ ಪ್ರಯಾಣ ಮಾಡುವೆನು.

(ನದೀಜಲದ ಬಳಿಯಲ್ಲಿ ಆಹ್ನಿಕಕ್ಕೆ ಕುಳಿತುಕೊಳ್ಳುವನು.)

(ಮನ್ಮಥನು ರಂಭಾದ್ಯಪ್ಸರಸೆಯರೊಡನೆ ಪ್ರವೇಶಿಸುವನು.)

**ಮನ್ಮಥ—೩೪** ತ್ರಿಲೋಕವಿಜಯನಾದ ನನ್ನ ಬಾಣಕ್ಕೆ ಸಿಕ್ಕದೆ ಇರುವವನು ಬ್ರಹ್ಮಸೃಷ್ಟಿಯಲ್ಲಿರುವನೇ! ಎಂತೆಂತಹ ಮಹಾ ತಪಸ್ವಿಗಳ ಮನವನ್ನೂ ಪಲ್ಲಟಮಾಡಿ, ಅವರನ್ನು ಮೋಹಪಾಶದಿಂದ ಕಟ್ಟಿ ನಾರೀಜನರ ದಾಸರನ್ನಾಗಿ ಮಾಡಿದ ನನ್ನ ಕುಸುಮಬಾಣವು ಆ ನಾರದಮುನಿಯನ್ನು ಸುಮ್ಮನೆ ಬಿಡುವುದೇ! ನಮ್ಮ ರಂಭಾಮೇನಕೆಯರಲ್ಲಿ ಯಾರೊಬ್ಬರನ್ನು ಕಳುಹಿಸಿದರೂ ಮಹಾಚತುರೆಯರಾದ ಇವರು ಕಾರ್ಯವನ್ನು ಸಾಧಿಸಿಕೊಂಡೇ ಬರುವರು. ಅದರೆ ನಾರದಮುನಿಯು, ಭೂಲೋಕಕ್ಕೆ ಬಂದರೆ, ಮೊದಲು ದ್ವಾರಕಾನಗರದಲ್ಲಿ ಶ್ರೀಕೃಷ್ಣಪರಮಾತ್ಮ

ನನ್ನು ನೋಡಿಕೊಂಡು ಹೋಗುವುದೇ ಪದ್ಧತಿಯೆಂದು ಕೇಳಿದ್ದೆನು. ಆದುದರಿಂದ ಈ ಮಾರ್ಗವಾಗಿ ಆತನು ಹೋಗುತ್ತಿರಬೇಕು. ಮುಂದೆ ಹೋಗಿ ಆತನಿರುವ ಸ್ಥಳವನ್ನು ಅರಿತು ತಕ್ಕ ಪ್ರಯತ್ನವನ್ನು ಮಾಡು ವೆನು. (ಮುಂದೆ ಹೋಗುತ್ತಾ) ಅದೋ! ಅದೋ! ಇಲ್ಲಿಯೇ ನದಿಯಲ್ಲಿ ಆಹ್ನಿಕಕ್ರಿಯೆಯಲ್ಲಿರುವಂತೆ ಕಾಣುವುದು. ಇದೀಗ ಸಮಯವು. (ಪಕ್ಕಕ್ಕೆ ನೋಡಿ) ಎಲಾ! ರಂಭಾಮೇನಕೆಯರೇ! ಅದೋ! ನೋಡಿ. ನಾರದಮುನಿಯು ನದೀತೀರದಲ್ಲಿರುವನು. ನೀವು ನಿಮ್ಮ ಗಾನನಾಟ್ಯ ಗಳನ್ನಾರಂಭಿಸಿ. ಆತನು ತನ್ನ ಗಮನವನ್ನು ನಿಮ್ಮ ಮೇಲೆ ತಿರುಗಿಸಿ ದೊಡನೆಯೇ ನಾನಾತನ ಮೇಲೆ ನನ್ನ ಕುಸುಮ ಬಾಣವನ್ನು ಪ್ರಯೋಗಿ ಸುವೆನು. ಆಗ ನಿಮ್ಮ ಒಳಿಗೆ ಒಂದ ಆತನಿಗೆ, ನೀವು ಸರಸಕ್ಕೆ ಅವಕಾಶ ಕೊಡದೆ, ಬಿಂಕವನ್ನು ತೋರಿಸುತ್ತಿರಿ. ನಾನು ಮತ್ತೆ ಮತ್ತೆ ಬಾಣ ಗಳನ್ನು ಪ್ರಯೋಗಿಸುತ್ತಾ ಆತನ ಚಿತ್ತವನ್ನು ಕಾಯಿಸಿ ಬೇಯಿಸಿ ಆತ ನಿಗೆ ಹುಚ್ಚನ್ನು ಹತ್ತಿಸುವೆನು. ಅನಂತರ ವಿನೋದವನ್ನು ನೋಡೋಣ. ನೀವು ಮಾತ್ರ ಆತನಿಂದ ಪರಾಜಯವನ್ನು ಪಡೆಯದಂತೆ ನಿಮ್ಮ ಚಾತು ರ್ಯವನ್ನು ತೋರಿಸಬೇಕು.

**ರಂಭೆ**—ಹಾಗೆಯೇ ಆಗಲಿ. ತ್ರಿಲೋಕವಿಜಯನಾದ ನೀನು ನಮಗೆ ಬೆಂಬಲ ನಾಗಿರುವಲ್ಲಿ ನಮ್ಮ ಕಾರ್ಯದಲ್ಲಿ ಪರಾಜಯವೆಂದರೇನು!

(ರಂಭಾಮೇನಕೆಯರು ನಾಟ್ಯಮಾಡುವರು.)

**ನಾರದ**—(ಆಹ್ನಿಕಮಾಡಿ ಎದ್ದು ಮುಂದೆ ಬಂದು) ಇದೇನು! ಎಲ್ಲಿಯೋ ಮಧುರ ಗಾನವೂ ನಾಟ್ಯದ ಕಿಂಕಿಣಿಧ್ವನಿಯೂ ಕೇಳಿಬರುತ್ತಿರುವುವು!

(ಮನ್ಮಥನು ಮರೆಯಿಂದ ಬಾಣಪ್ರಯೋಗಮಾಡುತ್ತಿರುವನು.)

(ನಾರದನು ಮುಂದೆ ಬರುವಷ್ಟರಲ್ಲಿ ರಂಭಾಮೇನಕೆಯರು ನಾಟ್ಯಮಾಡುತ್ತಿರುವರು.)

ಆಹಾ! ಎಂತಹ ಮನೋಹರಾಕೃತಿಗಳು! ಏನು ಮಧುರವಾದ ಗಾನ! ಎಂತಹ ದಿವ್ಯನಾಟ್ಯ! ಇದನ್ನು ನೋಡಿ ಆನಂದಪಡದಿರುವವನ ಜನ್ಮವು ವ್ಯರ್ಥವೇ ಸರಿ! (ತಲೆದೂಗುತ್ತಾ ಆನಂದದಿಂದ ಭ್ರಾಂತನಾಗುವನು.) ೩೫

**ಮನ್ಮಥ**—(ಮರೆಯಲ್ಲಿ) ಸರಿ! ನನ್ನ ಪ್ರಯತ್ನವು ಚೆನ್ನಾಗಿ ಫಲಿಸಿತು.

**ನಾರದ**—ಲೋಕಮೋಹಕರವಾದ ಈ ದಿವ್ಯಸೌಂದರ್ಯವೂ ಸೌಂದರ್ಯಕ್ಕೆ ತಕ್ಕ ಅಲಂಕಾರವೂ ಇವೆರಡಕ್ಕೂ ತಕ್ಕ ಗಾನವೈಖರಿಯೂ ಗಾನಕ್ಕೆ ತಕ್ಕ ಅಭಿನಯಸಹಿತವಾದ ದಿವ್ಯನಾಟ್ಯವೂ ನಾಟ್ಯಕ್ಕೆ ತಕ್ಕ ಕುಲುಕೂ, ಇವೆಲ್ಲವೂ ಯಾರ ಮನವನ್ನು ತಾನೇ ಸೆರೆಹಿಡಿಯದಿರುವುದು! ಇಂತಹ ಆನಂದವು ಈ ರಮಣೀನಾಟ್ಯದಲ್ಲಿರುವುದರಿಂದಲೇ ಮನ್ಮಥನು ಸದಾ ಸ್ತ್ರೀಲೋಲನಾಗಿಯೂ, ದೇವೇಂದ್ರನು ನಾಟ್ಯಗಾನಪ್ರಿಯನಾಗಿಯೂ ಲೋಕೇಶ್ವರನಾದ ಶ್ರೀಕೃಷ್ಣಪರಮಾತ್ಮನು ರಮಣೀನರ್ತನವಿಲಾಸಲೀಲನಾಗಿಯೂ ಇರುವರು. ಇಂಥವರೇ ಹೀಗೆ ಆನಂದಪಡುತ್ತಿರುವಲ್ಲಿ ಮಿಕ್ಕವರ ಮಾತೇನು! ಆಹಾ! ಇವರ ಅಂಗರಾಗದ ಮತ್ತು ಪುಷ್ಪಗಳ ಸುಗಂಧವೋ ಪರಮಾಶ್ಚರ್ಯಕರವಾಗಿರುವುದು. ಪಂಚೇಂದ್ರಿಯಗಳಾನಂದವೇ ಪರಮಾನಂದವೆಂದು ಕೆಲವರು ಹೇಳುವರು; ಅದೇ ನಿಜ. ಏತಕ್ಕೆಂದರೆ, ಕಣ್ಣುಗಳಿಂದ ಸುಂದರಾಕೃತಿಗಳ ಅಂದವನ್ನೂ ಕಿವಿಗಳಿಂದ ಗಾನಮಾಧುರ್ಯವನ್ನೂ ನಾಸಿಕದಿಂದ ಸುಗಂಧವನ್ನೂ ಗ್ರಹಿಸಿ ಇಷ್ಟು ಆನಂದಪಟ್ಟೆನು. ಇನ್ನೂ ಜಿಹ್ವೆಯೂ, ಶರೀರವೂ, ಪಡೆಯುವ ಆನಂದವು ಎಂತಹದೆಂಬುದನ್ನು ಊಹಿಸಲು ಸಾಧ್ಯವಿಲ್ಲ. ಸ್ತ್ರೀ ವಿಲಾಸದಲ್ಲಿ ಅನಿರ್ವಾಚ್ಯವಾದ ಆನಂದವಿರುವುದರಿಂದಲೇ ಅನೇಕ ಜ್ಞಾನಿಗಳೂ ಸಹ ಸಂಸಾರಿಗಳಾಗಿರುವರು.

**ಮನ್ಮಥ**—(ಮರೆಯಲ್ಲಿ) ಮುನಿಯು ಬಲೆಗೆ ಬಿದ್ದನು. ಇನ್ನು ಹುಚ್ಚನ್ನು ಕೆರಳಿಸಿಬಿಟ್ಟು ಹೊರಟುಹೋದರೆ, ಈತನು ಪದ್ಧತಿಯಂತೆ ದ್ವಾರಕಾನಗರಕ್ಕೆ ಹೋಗುವನು. ಆಗ ಲೀಲಾವಿನೋದಮಯನಾದ ಕೃಷ್ಣಪರಮಾತ್ಮನಿಂದ ತಕ್ಕ ಪ್ರಾಯಶ್ಚಿತ್ತವಾಗುವುದು. ದೇವೇಂದ್ರನ ಇಷ್ಟವೂ, ನನ್ನ ಕಾರ್ಯವೂ ಸಫಲವಾಗುವುವು.

**ನಾರದ**—(ಆತ್ಮ) ಅದುದೆಲ್ಲವೂ ಆಗಲಿ! ಈ ಸ್ತ್ರೀ ವಿಲಾಸದ ಆನಂದವನ್ನು

ಪರೀಕ್ಷಿಸಿ ನೋಡಬೇಕೆಂಬ ಕುತೂಹಲವೇನೋ ನನಗೆ ಬಹಳವಾಗಿ ಉಂಟಾಗಿರುವುದು. (ಬಳಿಗೆ ಬಂದು ನೋಡಿ) ಓಹೋ ! ಇವರು ದೇವ ಲೋಕದ ರಂಭಾಮೇನಕೆಯರು ! (ಪ್ರಕಾಶ) ಎಲೌ ರಮಣಿಯರೇ ! ನಿಮ್ಮ ನಾಟ್ಯಗಾನಾಭಿನಯಗಳಿಂದ ನನಗತ್ಯಾನಂದವಾಯಿತು.

**ರಂಭೆ**—ಪೂಜ್ಯರೇ ! ತಮ್ಮಂತಹ ಮಹನೀಯರಾನಂದವೇ ನಮಗೆ ಶ್ರೇಯಸ್ಕರವಲ್ಲವೇ ? ತಮ್ಮ ಪ್ರೀತಿಯಿಂದ ಕೃತಾರ್ಥರಾದೆವು.

**ನಾರದ**—ಸಂತೋಷ. ನೀವು ಇಲ್ಲಿಗೆ ಬರಲು ಕಾರಣವೇನು ?

**ಮೇನಕೆ**—ಪೂಜ್ಯರೇ ! ಭೂಲೋಕ ಸಂಚಾರಕ್ಕಾಗಿ ಅಪ್ಸರಸೆಯರೊಡನೆ ಈ ಪ್ರಾಂತ್ಯಕ್ಕೆ ಬಂದು ವಿನೋದದಿಂದ ನಾಟ್ಯಮಾಡುತ್ತಿದ್ದೆವು.

**ನಾರದ**—ಹಾಗಾದರೆ, ನೀವು ಇನ್ನೂ ಇಲ್ಲಿ ಸ್ವಲ್ಪಕಾಲ ನಿಂತು ನನ್ನ ಮನಸ್ಸನ್ನಾನಂದಿಸಬಹುದಲ್ಲವೇ !

**ಮನ್ಮಥ**—(ಆತ್ಮ) ಪಿತ್ಥವು ಏರಿತು. ಇದನ್ನು ಇನ್ನೂ ಹೆಚ್ಚಿಸಬೇಕು. (ಮರೆಯಲ್ಲಿ) ಮೇನಕೇ ! ಆಗುವುದಿಲ್ಲವೆಂದು ಹೇಳಿ ಹೊರಟು ಬನ್ನಿ.

**ಮೇನಕೆ**—ಪೂಜ್ಯರೇ ! ಈಗಾಗಲೇ ಹೊತ್ತಾಯಿತು. ಇನ್ನು ವಿಳಂಬವಾದರೆ ದೇವೇಂದ್ರನು ಕೋಪಿಸುವನು. ಆದುದರಿಂದ ದಯವಿಟ್ಟು ನಮಗನುಜ್ಞೆಯನ್ನು ಕೊಡಬೇಕು. ಹೊರಡುವೆವು.

**ನಾರದ**— ೩೬ ಅಯ್ಯೋ ! ನೀವು ಖಂಡಿತವಾಗಿ ಹೋಗಕೂಡದು. ನಿಮ್ಮನ್ನು ನೋಡದೆ ನಾನು ಒಂದು ನಿಮಿಷವಾದರೂ ಇರಲಾರೆನು.

**ಮೇನಕೆ**—ಪೂಜ್ಯರೇ ! ಹಾಗಾದರೆ, ಅಲ್ಲಿರುವ ನಮ್ಮ ಸಖಿಯರಿಗೆ ಮುಂದೆ ಹೋಗುವಂತೆ ಹೇಳಿ ಬೇಗನೆ ಬರುವೆವು. ತಾವು ಇಲ್ಲಿಯೇ ಇರಿ.

**ನಾರದ**—ಬಹಳ ಸಂತೋಷ. ಆಗಲಿ. (ಆತ್ಮ) ನನ್ನಭೀಷ್ಟವು ಎಷ್ಟು ಅನುಕೂಲವಾಗಿ ಫಲಿಸಿತು ! ನನ್ನ ಸಂಕಲ್ಪವು ಫಲಿಸದಿರುವುದೆಂದರೇನು?

**ಮೇನಕೆ**—ರಂಭೇ ! ಮುನಿಯನ್ನು ಕಾದಿರುವಂತೆ ಹೇಳಿದೆವಷ್ಟೆ ! ಇನ್ನು

ಇಲ್ಲಿ ನಿಂತರೆ, ಒಂದು ವೇಳೆ ನಾವು ಆತನ ಶಾಪಕ್ಕೆ ಗುರಿಯಾಗಬೇಕಾದೀತು. ಆದುದರಿಂದ ನಡೆ. ಇನ್ನು ಕಾಲಿಗೆ ಬುದ್ಧಿ ಹೇಳುವ.

**ಮನ್ಮಥ**—ನೀವು ಹೊರಡಿ. ನಾನಾತನ ಹಿಂದೆಯೇ ಅಗೋಚರನಾಗಿದ್ದು ಏನಾದರೂ ಒಂದು ಅನರ್ಥವನ್ನುಂಟುಮಾಡಿಯೇ ಬರುವೆನು ನೀವು ಹೋಗಿ ಈ ವಾರ್ತೆಯನ್ನು ದೇವೇಂದ್ರನಿಗೆ ತಿಳಿಸಿ.

**ರಂಭೆ**—ಆಗಬಹುದು. (ಹೋಗುವರು.) (ಮನ್ಮಥನು ಮರೆಯಲ್ಲಿ ನೋಡುತ್ತಾ ನಿಲ್ಲುವನು.)

**ನಾರದ**—ಬೇಗನೆ ಬರುವುದಾಗಿ ಹೇಳಿ ಹೋದ ಆ ಮನೋಹರೆಯರು ಇನ್ನೂ ಬರಲೇ ಇಲ್ಲವಲ್ಲಾ! ನದೀತೀರಕ್ಕೆ ಹೋಗಿರುವರೋ! ಅಲ್ಲಿಗೆ ಹೋಗಿ ನೋಡಲೇ! (ಎದ್ದು) ಓಹೋ! ಈ ಪ್ರಾಂತ್ಯದಲ್ಲಿಯೇ ಹೋದರು. (ಮುಂದೆ ಬಂದು ನೋಡಿ) ಎಲ್ಲಿ! ಅವರು ಇಲ್ಲಿಯೂ ಇಲ್ಲವಲ್ಲಾ! (ಚಿಂತಿಸಿ) ಒಂದು ವೇಳೆ ಅವರು ಬಂದರೆ ತಾನೇ ಏನು! ಅವರು ನನ್ನೊಡನೆ ಸ್ಥಿರವಾಗಿರತಕ್ಕವರಲ್ಲ. ಅಲ್ಪಕಾಲವಿದ್ದು ದೇವಲೋಕಕ್ಕೆ ಹೋಗಿಬಿಡುವರು. ಇದರಿಂದ ನಾನು ಆಶಾಭಂಗವನ್ನು ಹೊಂದಬೇಕಾಗುವುದು. ಆದಕಾರಣ ಕೆಲವುಕಾಲ ನನ್ನೊಡನೆ ನಿಂತು ನನ್ನನ್ನಾನಂದಿಸತಕ್ಕ ಸುಂದರಿಯೊಬ್ಬಳನ್ನು ಪಡೆದು ವಿನೋದಪಡಬೇಕಲ್ಲವೇ!

**ಮನ್ಮಥ**—(ಮರೆಯಲ್ಲಿ) ಆಹಾ! ನನ್ನ ಅಸ್ತ್ರಕ್ಕೆ ಮುನಿಯು ಈಗ ಚೆನ್ನಾಗಿ ಸಿಕ್ಕಿ ಬಿದ್ದನು.

**ನಾರದ**—ಇದಕ್ಕೇನು ಮಾಡಲಿ? ಯಾರನ್ನು ಯಾಚಿಸಲಿ? (ಚಿಂತಿಸಿ) ಶ್ರೀಕೃಷ್ಣನಿಗೆ ನನ್ನಲ್ಲಿ ಪರಮಭಕ್ತಿ ವಿಶ್ವಾಸಗಳಿರುವುವು. ಆದುದರಿಂದ ನಾನೀಗಲೇ ದ್ವಾರಕಾಪುರಕ್ಕೆ ಹೋಗಿ ಅಲ್ಲಿ ಆತನ ಸಹಾಯದಿಂದ ನನ್ನ ಮನೋರಥಸಿದ್ಧಿಗವಕಾಶವನ್ನುಂಟುಮಾಡಿಕೊಳ್ಳುವೆನು.

**ಮನ್ಮಥ**—(ಮರೆಯಲ್ಲಿ) ನಾನೂ ನಿನ್ನ ಬಳಿಯಲ್ಲಿಯೇ ಇದ್ದು ತಕ್ಕ ಸಹಾಯವನ್ನು ನಾನು ಮಾಡುವೆನು.

## ದೃಶ್ಯ ೨. ಅರಮನೆ.

(ಶ್ರೀಕೃಷ್ಣನು ಸತ್ಯಭಾಮೆಯೊಡನೆ ಮಾತನಾಡುತ್ತಿರುವನು.)

**ಕೃಷ್ಣ**—ಪ್ರಿಯೇ! ಸತ್ಯಭಾಮೇ, ನಿನ್ನಿಷ್ಟದಂತೆ ಪಾರಿಜಾತವೃಕ್ಷವು ನಮಗೆ ಲಭಿಸಿತಲ್ಲವೇ? ಈಗಲಾದರೂ ನನ್ನ ಮೇಲಣ ಕೋಪವು ಶಾಂತವಾಯಿತೋ? ಮನಸ್ಸಿಗೆ ಸಂತೋಷವಾಯಿತೋ?

**ಸತ್ಯಭಾಮೆ**—ಛಿಛಿ ಆರ್ಯಪುತ್ರಾ! ನಿನ್ನ ಮೇಲೆ ನನಗೆ ಕೋಪವೆಂದರೇನು? ಅಥವಾ ನಾನು ಆ ರೀತಿ ಕೋಪವನ್ನು ನಟಿಸಿದ್ದರಿಂದಲೇ ಇಷ್ಟಾರ್ಥಗಳನ್ನು ಕೊಡುವ ಪಾರಿಜಾತವೃಕ್ಷವು ನಮಗೆ ಲಭಿಸಿದ್ದು. ಆದಿರಲಿ; ನಿನ್ನ ಮೇಲಿನ ಕೋಪವು ಕಾರ್ಯಸಾಧನೆಗಾಗಿ ನಾನು ಕಲ್ಪಿಸಿಕೊಂಡುದು. ಆದರೆ ಸವತಿಯರ ಮುಂದೆಯೂ, ಸಖಿಯರ ಮುಂದೆಯೂ ಮುಖ್ಯವಾಗಿ, ಆ ರುಕ್ಮಿಣಿಯ ಮುಂದೆ ಸಹ ನನ್ನನ್ನು ಆ ನಾರದರು ಹೀಯಾಳಿಸಿದುದನ್ನು ಕೇಳಿ, ನನಗೆ ಆತನು ಮಾಡಿದ ಅಪಮಾನಕ್ಕಾಗಿ ಆತನ ಮೇಲೆ ಅತ್ಯಾಗ್ರಹವುಂಟಾಯಿತು.

**ಕೃಷ್ಣ**—ಅದನ್ನು ತಿದ್ದಲು ನನಗಿಷ್ಟು ಶ್ರಮವಾಯಿತು.

**ಸತ್ಯಭಾಮೆ**—ಪ್ರಿಯಾ, ನಿನ್ನ ಶ್ರಮದಿಂದ ನನಗೆ ಫಲವಾಯಿತು. ಆದಿರಲಿ; ನನ್ನನ್ನು ಹಾಗೆ ದೂರಿ ಅವಮಾನಮಾಡಿದ ನಾರದಮುನಿಯನ್ನು ಏನಾದರೂ ರಗಳೆಗೆ ಸಿಕ್ಕಿಸಿ ನೋಡಿ ವಿನೋದಪಡಬೇಕೆಂದು ನನಗೆ ಬಹಳ ಕುತೂಹಲವುಂಟಾಗಿರುವುದಲ್ಲಾ!

**ಕೃಷ್ಣ**—ಕ್ಷಿಪ್ರದಲ್ಲಿಯೇ ಅಂತಹ ವಿನೋದವು ನಮಗೆ ಲಭಿಸಬಹುದು.

**ಮಕರಂದ**—(ಓಡಿಬಂದು) ಕೃಷ್ಣಾ! ಕೃಷ್ಣಾ! (ನಗುತ್ತಾ ನಿಲ್ಲುವನು.)

**ಕೃಷ್ಣ**—ಇದೇನೋ ಮಕರಂದಾ? ಹೀಗೆ ಹುಚ್ಚನಂತೆ ನಗುತ್ತಿರುವೆ?

**ಮಕರಂದ**—ಏನು ಹೇಳಲಿ ಕೃಷ್ಣಾ! (ನಗುವನು.)

**ಕೃಷ್ಣ**—ಅಯ್ಯೋ! ಹುಚ್ಚಾ! ಅದೇನು ವಿವರವಾಗಿ ಹೇಳಬಾರದೇನೋ?

**ಮಕರಂದ**—ನಾರದರು! (ನಗುವನು.)

**ಕೃಷ್ಣ**—ಅಯ್ಯೋ ! ಗ್ರಹಚಾರವೇ ! ಏನೋ ! ನಾರದರು ಬಂದರೆ ಇಷ್ಟು ನಗಬೇಕೇ ? ವಿಷಯವೇನು ತಿಳಿಸೋ !

**ಮಕರಂದ**—ಅಲ್ಲ, ಅಲ್ಲ ; ನಾರದರಿಗೆ, .... (ನಕ್ಕು) ಮದುವೆ .... ....

**ಕೃಷ್ಣ**—ಹೋಗೋ ಹುಚ್ಚಾ ! ನಾರದರಿಗೆ ಮದುವೆ ಎಂದರೇನೋ ?

**ಮಕರಂದ**—(ನಕ್ಕು) ನಿಜವಾಗಿಯೂ ನಾರದರಿಗೆ ಮದುವೆಯಾಗಬೇಕೆಂದು ಭ್ರಾಂತಿ ಹತ್ತಿರುವ ಹಾಗೆ ಕಾಣುವುದು ಕೃಷ್ಣಾ !

**ಸತ್ಯಭಾಮೆ**—ಪ್ರಿಯಾ ! ಅದೇನೋ ವಿಚಿತ್ರವಿರಬೇಕು. ಕ್ರಮವಾಗಿ ವಿಚಾರಿಸು.

**ಮಕರಂದ**—ವಿಚಿತ್ರವೋ ! ನಾನೇನೆಂದು ಹೇಳಲಿ ! ಬರುತ್ತಾ ದಾರಿಯಲ್ಲಿರುವ ಗಿಡಮರಗಳನ್ನೆಲ್ಲ, " ಹಾ ! ರಂಭೇ ! ಹಾ ! ಮೇನಕೆ ! " ಎಂದು ಮಾತನಾಡಿಸುತ್ತಿರುವರು. ಸಿಟ್ಟು ಸಿರಸ್ಸು ಬಿಟ್ಟು ಚಿಂತಿಸುತ್ತಾ ತಮ್ಮಲ್ಲಿ ತಾವೇ ಮಾತನಾಡಿಕೊಳ್ಳುತ್ತಿರುವರು.

**ಕೃಷ್ಣ**—ಎಲವೋ ! ಹುಚ್ಚಾ ! ಸಾಕೋ ನಿನ್ನ ಪರಿಹಾಸ್ಯವು ! ನೀನೇನಾದರೂ ತೀಟೆಯನ್ನು ಮಾಡಿ ಅವರನ್ನು ಕೆರಳಿಸಿ ಬಂದೆಯೇನೋ ?

**ಮಕರಂದ**—ನಾನು ಕೆರಳಿಸಬೇಕೇ ಕೃಷ್ಣಾ ! ಅವರಿಗೆ ಕೆರಳಿರುವ ಹುಚ್ಚು ಈ ಪ್ರಪಂಚವನ್ನೇ ತುಂಬಬಹುದು. ನೀನು ನೋಡಲೆಂದು ನಿನಗೆ ತಿಳಿಸಲು ಬಂದೆನು.

**ಸತ್ಯ**—ಇದು ವಿಚಿತ್ರವೇ ಸರಿ ! ಮಕರಂದಾ ಈಗ ನಾರದರೆಲ್ಲಿರುವರೋ !

**ಮಕರಂದ**—ಆ ಮಾವಿನ ಮರದಕೆಳಗೆ ಕುಳಿತು ತಮ್ಮಲ್ಲಿ ತಾವೇ ಮಾತನಾಡಿಕೊಳ್ಳುತ್ತಿರುವರು.

**ಕೃಷ್ಣ**—ಏನೆಂದು ?

**ಮಕರಂದ**—ನಾನೇನೆಂದು ಹೇಳಲಿ ! ಆ ಮರವನ್ನು ನೋಡಿ ನೋಡಿ, "ಅದೋ, ತುಟಿಗಳು ಈ ಚಿಗುರುಗಳಂತೆಯೇ ಇದ್ದುವು, ಅವಳ ಕೈ ಕಾಲುಗಳು ಎಷ್ಟು ಕೋಮಲವಾಗಿದ್ದುವು ! ಅಯ್ಯೋ ! ಅವಳ ಗಾನ

ವಂತೂ ಕೋಗಿಲೆಯ ಗಾನದಂತೆಯೇ ಇತ್ತು. ಪುನಃ ಬರುತ್ತೇನೆಂದು ಹೇಳಿಹೋದವಳು ಬರಲೇ ಇಲ್ಲವಲ್ಲಾ! ಈಗ ನಾನು ಏನು ಮಾಡಲಿ! ಸಂಸಾರ ಸುಖವನ್ನು ಹೊಂದಲುಪಾಯವೇನು ?'' ಎಂದು ಹುಚ್ಚನಂತೆ ಹರಟುತ್ತಾ ಸಿಟ್ಟುಸಿರನ್ನು ಬಿಡುತ್ತಾ ನೆತ್ತಿಯಮೇಲೆ ಕೈಗಳನ್ನಿಟ್ಟುಕೊಂಡು ಕುಳಿತಿದ್ದರು. ನಾನು ಹಿಂದೆಯೇ ನಿಂತು ಎಲ್ಲವನ್ನೂ ಕೇಳಿದೆನು. ನನಗೆ ಬಲು ನಗು ಬಂತು. ಫ.... ಕ್ಕನೆ ನಕ್ಕುಬಿಟ್ಟೆ. ಹಿಂದಿರುಗಿ ನೋಡಿ ತಲೆತಗ್ಗಿಸಿಕೊಂಡರು. ಕೃಷ್ಣಾ! ಅದನ್ನು ನೋಡಿ ನಿನಗೆ ತಿಳಿಸೋಣವೆಂದೋಡಿ ಬಂದೆನು. ಪಾಪ! ಆ ನಾರದರಿಗೆ ನೀನೇನಾದರೂ ಒಂದು ಗತಿಯನ್ನು ಮಾಡಬಾರದೇ?

**ಸತ್ಯಭಾಮೆ**—ಆರ್ಯಪುತ್ರಾ! ಏನೋ ವಿಶೇಷ ಸಂದರ್ಭವೇ ಇರುವುದು. ನಾರದರು ನಮ್ಮಲ್ಲಿ ಕಲಹವನ್ನುಂಟುಮಾಡಿದುದಲ್ಲದೆ, ಪಾಪ! ನಿರಪರಾಧಿಯಾದ ದೇವೇಂದ್ರನಿಗೂ ನಿಮ್ಮಿಂದ ಶಿಕ್ಷೆಮಾಡಿಸಿದರು. ಆದುದರಿಂದ ಮಕರಂದನು ಹೇಳಿದುದು ಒಂದು ವೇಳೆ ನಿಜವಾಗಿದ್ದರೆ, ಈ ಸಮಯದಲ್ಲಿ ನಾರದರಲ್ಲಿ ನಿನ್ನ ಚಮತ್ಕಾರವನ್ನು ತೋರಿಸಲೇಬೇಕೆಂದು ನನ್ನ ಪ್ರಾರ್ಥನೆ.

**ಕೃಷ್ಣ**—ಆಗಲಿ ನೋಡುತ್ತಿರು. (ಮಕರಂದನನ್ನು ನೋಡಿ) ಮಕರಂದಾ! ಮೆಲ್ಲನೆ ನಾರದರನ್ನು ಇಲ್ಲಿಗೆ ಕರೆದುಕೊಂಡು ಬರುವೆಯಾ?

**ಮಕರಂದ**—ಓಹೋ! ಅದಕ್ಕೇನು! ಅದನ್ನೇ ಕೇಳೋಣವೆಂದು ಬಂದೆನು.

**ಕೃಷ್ಣ**—ಆದರೆ, ಅವರಲ್ಲಿ ತಲೆಯೆಲ್ಲ ಹರಟಿ ರಸಾಭಾಸ ಮಾಡಬೇಡ.

**ಮಕರಂದ**—ಇಲ್ಲನಪ್ಪಾ! ರಸವೋ! ಆಭಾಸವೋ! ಏನನ್ನೋ ನೀನೇ ಮಾಡು. (ಹೋಗುವನು.)

**ಕೃಷ್ಣ**—ಭಾಮೇ, ನಾರದರು ನಿಷ್ಕಾರಣವಾಗಿ ನನಗೂ ದೇವೇಂದ್ರನಿಗೂ ವಿರೋಧವನ್ನು ತಂದಿಟ್ಟುದರಿಂದ ನಾನು ಅವರಲ್ಲಿ ಸ್ವಲ್ಪ ವಿಚಿತ್ರಸಂಧಿಯನ್ನು ತಂದಿಟ್ಟು ಕುಣಿಸಿ ವಿನೋದಪಡಬೇಕೆಂದು ಆಲೋಚಿಸಿದೆನು.

ಆ ನನ್ನ ಸಂಕಲ್ಪದಿಂದಲೇ ದೇವೇಂದ್ರನು ಆ ಮುನಿಯಮೇಲೆ ಸೇಡನ್ನು ತೀರಿಸಿಕೊಳ್ಳಲು ಪ್ರಯತ್ನಿಸಿ ನಮ್ಮ ಪ್ರದ್ಯುಮ್ನನ ಸಹಾಯವನ್ನಪೇಕ್ಷಿಸಿರುವನು. ಅದರಿಂದಲೇ ನಿನ್ನ ಇಷ್ಟದಂತೆ ನಾರದವಿನೋದ ನಾಟಕವು ಪ್ರಾರಂಭವಾಗಿರುವುದು !

**ಭಾಮೆ**—ಬಹಳ ಸಂತೋಷ ! ನೀನು ಮಾತ್ರ ಈ ವಿನೋದನಾಟಕವನ್ನು ಬಹಳ ಚೆನ್ನಾಗಿ ನಡೆಯಿಸಬೇಕು.

**ಕೃಷ್ಣ**—ಆಗಲಿ. ನೋಡುತ್ತಿರು.

**ಮಕರಂದ**—(ನಾರದನನ್ನು ಕರೆತರುವನು.) ಪೂಜ್ಯರೇ, ಹೀಗೆ ದಯಮಾಡಿಸಬೇಕು; ಹೀಗೆ ದಯಮಾಡಿಸಬೇಕು.

(ಕೃಷ್ಣಸತ್ಯಭಾಮೆಯರು ಎದ್ದು ವಂದಿಸಿ, ನಾರದನನ್ನು ಪೀಠದಮೇಲೆ ಕುಳ್ಳಿರಿಸುವರು )

**ನಾರದ**—(ಕುಳಿತು) ನಿಮಗೆ ಮಂಗಳವಾಗಲಿ.

**ಕೃಷ್ಣ**—(ನಾರದನ ಮುಖವನ್ನು ನೋಡಿ ಮುಗುಳ್ನಗೆಯಿಂದ) ಪೂಜ್ಯರೇ ! ನೀವು ಬಹಳ ಚಿಂತಾಸಕ್ತರಾಗಿರುವಂತೆ ಕಾಣುವುದಲ್ಲಾ ! ಅಪ್ಪಣೆಯಾದರೆ ಮನಸ್ಸಿನ ಚಿಂತೆಯೇನಿದ್ದರೂ ಅದನ್ನು ನಾನು ಪರಿಹರಿಸುವೆನು.

**ನಾರದ**—(ಆತ್ಮ) ನನ್ನಭಿಲಾಷೆಯನ್ನು ಹೇಗೆ ತಿಳಿಸಲಿ ! ಒಂದು ವೇಳೆ ತಿಳಿಸಿದರೆ ಪರಿಹಾಸ್ಯಮಾಡಿ ನಕ್ಕುಬಿಡುವರೋ ಏನೋ ! ಇರಲಿ. ಉಪಾಯದಿಂದ ತಿಳಿಸುವೆನು. (ಪ್ರಕಾಶಂ) ಶ್ರೀ ಕೃಷ್ಣಾ ! ಮತ್ತೇನೂ ಇಲ್ಲವು; ದೇವಾಧಿಪತಿಯಾದ ಮಹೇಂದ್ರನು ರಂಭಾದ್ಯಪ್ಸರಸೆಯರ ಗಾನನಾಟ್ಯಾದಿವಿಲಾಸಗಳಿಂದ ನಲಿಯುತ್ತಿರುವನು. ಪರ್ವತವಾಸಿಯಾದ ಪರಮೇಶ್ವರನೂ ಸಹ ಪತ್ನಿಯನ್ನು ಎಡಬಿಡದೆ ತನ್ನ ಅರ್ಧಶರೀರದಲ್ಲಿಯೇ ಸದಾ ಧರಿಸಿರುವನು. ಮಹಾನುಭಾವನೂ ಜ್ಞಾನಿಯೂ ಆದ ನೀನೂ ಸಹ ಸದಾ ರಮಣೀವಿಲಾಸದಲ್ಲಿರುವೆ ! ಇದರಿಂದ ಸ್ತ್ರೀವಿಲಾಸದಲ್ಲಿರುವ ಸಂತೋಷಸುಖಗಳೇನೆಂಬುದನ್ನು ತಿಳಿಯಬೇಕೆಂದಾಲೋಚಿಸುತ್ತಿರುವೆನು.

**ಮಕರಂದ**—ನಾರದರೇ! ಅದು ಆಲೋಚನೆಯಿಂದ ತಿಳಿಯತಕ್ಕುದಲ್ಲ. ಪ್ರತ್ಯಕ್ಷವಾಗಿ ಒಬ್ಬಳನ್ನು ಗಂಟುಹಾಕಿಕೊಂಡು ಅನುಭವಿಸಿದರೆ ಚೆನ್ನಾಗಿ ತಿಳಿಯುವುದು. ಅವಳು ಚಂಡಿಯಾದರಂತೂ ಮತ್ತೂ ಚೆನ್ನಾಗಿ ತಿಳಿಯುವುದು.

**ಕೃಷ್ಣ**—ಮಕರಂದಾ! ನೀನೆಂತಹ ಅವಿವೇಕಿಯೋ! ಸ್ವಲ್ಪ ಸುಮ್ಮನಿರ ಬಾರದೇನೋ? ತಲೆಯೆಲ್ಲ ಹರಟುತ್ತಿರುವೆ! ಸಾಕು. (ನಾರದರನ್ನು ನೋಡಿ) ಪೂಜ್ಯರೇ! ಸಂಶಯಗಳು ಬಂದೊಡನೆಯೇ ಅವುಗಳನ್ನು ಪರಿಹರಿಸಿ ಕೊಳ್ಳುವುದು ತಮ್ಮಂತಹ ಜ್ಞಾನಿಗಳ ಸ್ವಭಾವವು. ಆದರಿಂದ ತಾವು ಸಂಕೋಚಪಡದೆ ಅಪ್ಪಣೆಕೊಡಿಸಿದರೆ ಈ ವಿಷಯದಲ್ಲಿ ನನ್ನಿಂದಾಗ ಬೇಕಾದ ಕಾರ್ಯವನ್ನು ಮಾಡಲು ಸಿದ್ಧನಾಗಿರುವೆನು.

**ಸತ್ಯಭಾಮೆ**—ಆರ್ಯಪುತ್ರಾ! ಪೂಜ್ಯರ ಸೇವೆಮಾಡಿ ಅವರನ್ನು ಸಂತೋಷ ಪಡಿಸುವುದಕ್ಕಿಂತಲೂ ಬೇರೆ ಕಾರ್ಯವುಂಟೇ! ಮೊದಲು ಅವರ ಅಭಿಲಾಷೆಯನ್ನು ತಿಳಿದು ಅದರಂತೆ ನಡೆಯಿಸು.

**ಮಕರಂದ**—ಅಭಿಲಾಷೆಯಿನ್ನೇನು! ತಿಳಿಯದೇ? ಅವರಿಗೆ ಸಂಸಾರ ಸುಖವು ಪ್ರತ್ಯಕ್ಷವಾಗಿ ತಿಳಿಯುವಂತೆ ಮದುವೆಯನ್ನು ಮಾಡಿಸುವುದು.

**ನಾರದ**—ಮಕರಂದಾ! ಮೌನಿಗಳಾದ ನಮಗೆ ಮದುವೆಯೆಂದರೇನು? ಅದು ಸಾಧ್ಯವೇ?

**ಮಕರಂದ**—ಮೌನವನ್ನು ಬಿಟ್ಟರೆ ಮದುವೆಯಾಗುವುದು ಸ್ವಾಮಿಾ!

**ನಾರದ**—ಮೌನವನ್ನೇನೋ ಬಿಡಬಹುದು. ಮದುವೆಯಾಗುವುದು ಕಷ್ಟ ವೆಂದು ತೋರುವುದು.

**ಮಕರಂದ**—ಕಷ್ಟವೇನು? ನೀವು ಒಪ್ಪುವುದಾದರೆ ನಮ್ಮ ಶ್ರೀಕೃಷ್ಣನು ನಿಮಗೆ ಆಗಬೇಕಾದುದೆಲ್ಲವನ್ನೂ ಕ್ಷಣಾರ್ಧದಲ್ಲಿ ಮಾಡಿಬಿಡುವನು.

**ಕೃಷ್ಣ**—(ಪಕ್ಕದಲ್ಲಿ) ಇವರ ಅಭಿಪ್ರಾಯವು ತಿಳಿದಂತಾಯಿತಲ್ಲವೇ ಭಾಮೇ! (ನಾರದನನ್ನು ನೋಡಿ) ಪೂಜ್ಯರೇ! ಆ ಅವಿವೇಕಿಯ ಮಾತನ್ನು ಕೇಳ

ಬೇಡಿ ; ತಮಗೆ ಸಂಸಾರಾಪೇಕ್ಷೆಯಿದ್ದಲ್ಲಿ ಇಷ್ಟು ಆಲೋಚಿಸಬೇಕೇ ? ತಮ್ಮ ಶಿಷ್ಯನಾದ ಈ ಕೃಷ್ಣನಿರುವಲ್ಲಿ ತಮಗೆ ಕೊರತೆಯೇನು ?

**ಮಕರಂದ**—ಕೃಷ್ಣಾ ! ಬರಿಯಬಾಯಿಮಾತಿನ ಉಪಚಾರವೇ ಆಯಿತಪ್ಪಾ ! ಹಾಗೆ ನಿನಗೆ ನಾರದರಲ್ಲಿ ಭಕ್ತಿವಿಶ್ವಾಸಗಳಿದ್ದರೆ ಸಾವಿರಾರು ಜನ ರಮಣಿಯರುಳ್ಳ ನೀನು ಪೂಜ್ಯರಿಗೆ ಒಂದು ಒಳ್ಳೆಯ ಹೆಣ್ಣನ್ನು ಹೊಂಚಿ ಕೊಡಬಾರದೋ ?

**ನಾರದ**—(ಆತ್ಮ) ಮಕರಂದನು. ಒಳ್ಳೆಯ ಮಾತನ್ನಾಡಿದನು. ಭಲಾ ! ಮಕರಂದಾ ! ನೀನು ಅವಿವೇಕಿಯೆಂದು ತಿಳಿದಿದ್ದೆನು. ಆದರೂ ಒಳ್ಳೆಯ ಆಲೋಚನೆಯನ್ನೇ ಹೇಳಿದೆ !

**ಕೃಷ್ಣ**—ಮಕರಂದಾ ನಾನು ಇಲ್ಲವೆಂದು ಹೇಳಿದೆನೇನೋ ? ನನಗಿದು ಬಹಳ ಸಂತೋಷ. (ನಾರದರನ್ನು ನೋಡಿ) ಪೂಜ್ಯರೇ ! ತಾವಾಲೋಚಿಸಬೇಡಿ. ತಮ್ಮ ಕನ್ಯೆಯರಿಗೆ ಸರಿಯಾದ ವರನು ಸಿಕ್ಕಲಿಲ್ಲವೆಂದು ಹುಡುಕುತ್ತಿರುವ ಶ್ರೋತ್ರಿಯರು ನಮ್ಮ ನಗರದಲ್ಲಿ ಎಷ್ಟೋ ಮಂದಿ ಇರುವರು. ಕನ್ಯೆಯರ ತಾಯಿಯರು ನನ್ನ ಪತ್ನಿಯರಲ್ಲಿ ಆಗಾಗ ಬಂದು ಈ ವಿಚಾರವನ್ನು ಹೇಳಿಕೊಳ್ಳುತ್ತಿರುವರೆಂದು ನನಗೆ ಅವರಿಂದಲೇ ತಿಳಿಯಿತು. ಕನ್ಯಾಪಿತೃಗಳು ತಮ್ಮಂತಹ ಮಹಿಮರು ದೊರೆತರೆ ಧನ್ಯರಾದೆವೆಂದು ತಿಳಿಯುವರು. ನಮ್ಮ ಭಾಮೆಯುಬಳಿಗೆ ಮಾತ್ರ ಅಂಥವರು ಯಾರೂ ಬಂದಂತೆಯಿಲ್ಲ. ಆದುದರಿಂದ ತಾವು ನಾನಿಲ್ಲದಿರುವಾಗ ನನ್ನ ಪತ್ನಿಯರಲ್ಲಿ ಭಾಮೆಯ ಹೊರತು ಉಳಿದ ಯಾರನ್ನು ನೋಡಿ ನಿಮ್ಮಭಿಲಾಷೆಯನ್ನು ತಿಳಿಸಿದರೂ ಅವರು ನಿಮ್ಮ ಸೇವೆಗೆ ತಕ್ಕ ಮತ್ತು ನೀವು ಒಪ್ಪುವಂತಹ ಕನ್ನಿಕೆಯನ್ನು ನಿಮ್ಮ ಹಿಂದೆ ಕಳುಹಿಸಿ ಕೊಡಲು ಏರ್ಪಡಿಸುವರು. ಆದುದರಿಂದ ತಾವು ಸಂದೇಹಪಡದೆ ಮುಂದಿನ ಕಾರ್ಯ್ಯವಾಡಿ ; ಆದರೆ ನನ್ನಎದುರಲ್ಲಿ ಮಾತ್ರ ನೀವು ಅವರಲ್ಲಿ ಈ ಪ್ರಸಕ್ತಿಯನ್ನೆತ್ತಿದರೆ ಕಾರ್ಯ್ಯವು ಕೆಟ್ಟುಹೋಗುವುದು. ಆದುದರಿಂದ ನಾನಿಲ್ಲದಿರುವಾಗಲೇ ಹೋಗಿ ವಿಚಾರಿಸಿ.

**ನಾರದ**—ಆಹ ಶ್ರೀಕೃಷ್ಣಪರಮಾತ್ಮಾ ಬಹಳ ಸಂತೋಷ. ಕರುಣಾಶಾಲಿಯೂ ಇಂಗಿತಜ್ಞನೂ ಪರೋಪಕಾರಿಯೂ, ಜ್ಞಾನಿಯೂ ಅಂದರೆ, ನೀನೆ! ನನ್ನಭಿಪ್ರಾಯವನ್ನು ಬಹಳ ಚೆನ್ನಾಗಿ ಊಹಿಸಿ ನನಗನುಕೂಲ ಮಾಡಿದೆ. ನಿನಗೆ ಮಂಗಳವಾಗಲಿ.

**ಮಕರಂದ**—ಪೂಜ್ಯರೇ! ಕೃಷ್ಣನ ಮಾತನ್ನು ನಂಬಬೇಡಿ. ಮೊದಲು ಮಾತನ್ನು ಗಟ್ಟಿಮಾಡಿಕೊಳ್ಳಿ.

**ಕೃಷ್ಣ**—ಎಲವೋ! ಹುಚ್ಚಾ; ಯಾವಾಗಲೂ ಇದೇ ಅಲ್ಲವೆ ನಿನ್ನ ವಕ್ರಸ್ವಭಾವ! ಪೂಜ್ಯರಿಗೆ ಹಾಗೆಂದಿಗೂ ಆಗಲಾರದು ಬಾಯಿಮುಚ್ಚು!

**ಮಕರಂದ**—ಸರಿ. ಇನ್ನು ಭಯವಿಲ್ಲ, ಪೂಜ್ಯರೇ! ನಿಮ್ಮ ಕೆಲಸವಾಯಿತು. ನಾನು ಇನ್ನು ಬಾಯಿಮುಚ್ಚಿಕೊಂಡು ಕಣ್ಣು ತೆರೆದುಕೊಂಡಿರುವೆನು. ನೀವು ಬಾಯಿತೆರೆದುಕೊಂಡು ಕಣ್ಣುಮುಚ್ಚಿಕೊಂಡು ಹೊರಡಿ.

**ನಾರದ**—(ಹೋಗುವನು.)

## ದೃಶ್ಯ ೩. ದ್ವಾರಕಾನಗರದ ಅರಮನೆಯ ಮುಂದೆ.

**ಮನ್ಮಥ**—(ಪ್ರವೇಶಿಸಿ ಆತ್ಮಗತ) ಲೋಕದಲ್ಲಿ ಜನರು ಎಷ್ಟು ಜ್ಞಾನಿಗಳಾದರೇನು! ನನ್ನ ಬಾಣಹತಿಗೆ ಸಿಕ್ಕಿದಮೇಲೆ ಅವರ ಜ್ಞಾನವೆಲ್ಲವೂ ಮಾಯವಾಗುವುದು. ಅಷ್ಟಲ್ಲದೆ ನನ್ನನ್ನು ತ್ರಿಲೋಕವಿಜಯಿಯೆಂದು ಸಕಲರೂ ಹೇಳುವರೇ! ನಾರದನನ್ನು ನಾನು ಮರುಳುಮಾಡಿದುದರಿಂದ ಪುರಂದರನು ನನ್ನ ಸಾಹಸವನ್ನು ಮೆಚ್ಚುವನೆಂಬುದರಲ್ಲಿ ಸಂದೇಹವಿಲ್ಲ. ಶ್ರೀಕೃಷ್ಣನಾರದರ ಸಂವಾದವೆಲ್ಲವನ್ನೂ ನಾನು ಅದೃಶ್ಯನಾಗಿದ್ದು ಕೇಳಿದೆನು. ಕೃಷ್ಣನು ಕಪಟನಾಟಕಸೂತ್ರಧಾರಿ; ಮಹಾ ವಿನೋದಪುರುಷನು! ಇದರಿಂದ ನಾರದನಿಗೆ ಏನಾದರೊಂದು ವಿಚಿತ್ರ ವಿನೋದವನ್ನು ತೋರಲೇ ತೋರಿಸಿ, ಆತನ ಚಾಪಲ್ಯಕ್ಕೆ ತಕ್ಕಂತೆ ಅವಮಾನ ಮಾಡುವನು. ಆದಕಾರಣ ನಾನೀಗಲೇ ಹೋಗಿ ಮಹೇಂದ್ರನಿಗೆ ಈ

ವಿಷಯವೆಲ್ಲವನ್ನೂ ತಿಳಿಸಿ ಮುಂದೆ ನಡೆಯುವ ವಿಚಿತ್ರಗಳನ್ನು ನೋಡಲು ಆತನನ್ನು ಇಲ್ಲಿಗೆ ಕರೆತರುವೆನು. (ಹೋಗುವನು.)

**ನಾರದ**—(ಪ್ರವೇಶಿಸಿ) ಆಹಾ! ನನ್ನ ಇಷ್ಟಾರ್ಥವು ಇಷ್ಟು ಸುಲಭವಾಗಿ ಫಲಿಸುವುದೆಂದು ನಾನು ಸ್ವಪ್ನದಲ್ಲಿಯೂ ತಿಳಿದಿರಲಿಲ್ಲ. ಆದರೆ ನನ್ನ ಸಂಕಲ್ಪಕ್ಕೆ ಚ್ಯುತಿಯುಂಟೇ! ನಾನೀಗಲೇ ಶ್ರೀಕೃಷ್ಣನು ಹೇಳಿದಂತೆ, ಆ ಕಾಂತೆಯರ ಮನೆಗಳಲ್ಲಿ ಕೃಷ್ಣನಿಲ್ಲದ ವೇಳೆಯನ್ನು ನೋಡಿ ಪ್ರವೇಶಿಸಿ, ಆತನ ರಾಜ್ಞಿಯರ ಅನುಗ್ರಹದಿಂದ, ಅಪ್ಸರಸೆಯರನ್ನು ತಿರಸ್ಕರಿಸುವ ಯಾವಳಾದರೂ ಮೋಹಿನಿಯನ್ನು ಕೈವಶಮಾಡಿ ಸಂಪಾದಿಸುವೆನು.

(ಹೋಗುವನು.)

## ದೃಶ್ಯ ೪. ದ್ವಾರಕಾನಗರದ ಬೀದಿ.

(ಕೃಷ್ಣನ ರಾಜ್ಞಿಯರ ಮನೆಗಳ ಮುಂದೆ ನಾರದ ಮಕರಂದರ ಪ್ರವೇಶ.)

**ಮಕರಂದ**—ಶ್ರೀ ಪೂಜ್ಯರೇ! ಹೀಗೆ ದಯಮಾಡಿಸಬೇಕು. ಇದೋ! ಇದು ಜಾಂಬವತಿಯ ಸೌಧ. ಇದು ಕಾಳಿಂದಿಯ ಭವನ. ಇದು ಮಿತ್ರವಿಂದೆಯ ಪ್ರಾಸಾದ. ಇದು ಮಧುರವಾಣಿಯ ಮಂದಿರ. ಇವೆಲ್ಲವೂ ಆ ಕೃಷ್ಣನ ಕಾಂತೆಯರ ಮನೆಗಳು. ಇವುಗಳನ್ನು ಪ್ರವೇಶಿಸಿ ತಾವು ಕೃಷ್ಣನು ಹೇಳಿದಂತೆ ನಡೆಯಿಸಬಹುದು.

**ನಾರದ**—ಬಹಳ ಸಂತೋಷ! ಈ ಮನೆಗಳನ್ನು ಪ್ರವೇಶಿಸಿ ನೋಡುವೆನು.

(ಹೋಗುವನು.) (ಶ್ರೀಕೃಷ್ಣನು ಎಲ್ಲ ಮನೆಗಳಲ್ಲಿಯೂ ರಮಣಿಯರೊಡನೆ ಬೇರೆಬೇರೆಯಾದ ವಿನೋದಗಳಿಂದಿರುವನು.)

**ನಾರದ**—(ಒಳಗೆ ಹೋಗಿ ಬಂದು ಆಶ್ಚರ್ಯದಿಂದ) ಏನಿದು ಪರಮಾಶ್ಚರ್ಯ! ನಾನು ಯಾವ ಯಾವ ಮನೆಯನ್ನು ಪ್ರವೇಶಿಸಿ ನೋಡಿದರೂ ಅಲ್ಲಿ ಶ್ರೀಕೃಷ್ಣನು ಯಾವುದಾದರೂ ಕ್ರೀಡೆಯಲ್ಲಿ ಕುಳಿತೇ ಇರುವನು! ಎಲ್ಲರ ಮನೆಗಳನ್ನೂ ಪ್ರವೇಶಿಸಿ ನೋಡಿದುದಾಯಿತು. ಇನ್ನು ಯಾರ ಮನೆಗೆ ಹೋಗಲಿ?

**ಮಕರಂದ**—ನಾರದರೇ! ಇಷ್ಟು ಮನೆಗಳನ್ನು ನೋಡಿದಿರಿ. ಮುಖ್ಯವಾದ ಸ್ಥಳಕ್ಕೇ ಹೋಗಲಿಲ್ಲವಲ್ಲಾ!

**ನಾರದ**—ಎಲ್ಲಿಗೆ?

**ಮಕರಂ**—ಶ್ರೀಕೃಷ್ಣನ ಮುಖ್ಯರಾಜ್ಞಿಯಾದ ರುಕ್ಮಿಣೀದೇವಿಯ ಮನೆಗೆ.

**ನಾರದ**—ನಿಜ! ಮಕರಂದಾ! ನಿಜ! ನಿಜ! ಶ್ರೀಕೃಷ್ಣನಿಗೆ ನನ್ನಲ್ಲಿ ಪರಿಪೂರ್ಣ ಪ್ರೀತಿಯೂ ಗೌರವವೂ ಇರುವುದರಿಂದ ಸಾಮಾನ್ಯರಾದ ತನ್ನ ಪತ್ನಿಯರಿಗಿಂತಲೂ ರುಕ್ಮಿಣೀದೇವಿಯೇ ನನಗೆ ಸಹಾಯಮಾಡಲು ತಕ್ಕವಳೆಂದು ಇತರ ಎಲ್ಲಾ ಸ್ತ್ರೀಯರ ಮನೆಗಳಲ್ಲಿಯೂ ತಾನು ಇದ್ದನು. ರುಕ್ಮಿಣೀ ಮಂದಿರದಲ್ಲಿ ನಿಜವಾಗಿಯೂ ಇರಲಾರನು. ನಡೆ, ಅಲ್ಲಿಗೆ ಹೋಗೋಣ. (ಹೋಗುವರು.)

## ದೃಶ್ಯ ೫—ಬೀದಿಯಲ್ಲಿ ಮಕರಂದನೂ ನಾರದರೂ ಪ್ರವೇಶಿಸುವರು.

**ಮಕರಂದ**—ಸಾಕಪ್ಪಾ! ನಾರದರೇ ನಿಮ್ಮ ಸಹವಾಸ; ನಾನು ಮನೆಗೆ ಹೋಗುತ್ತೇನೆ.

**ನಾರದ**—ಅದೇತಕ್ಕಯ್ಯಾ ಮಕರಂದಾ! ಅಷ್ಟು ಬೇಸರ?

**ಮಕರಂದ**—ನನಗೆ ಕಾಲು ನೋಯುವುದು ಸ್ವಾಮಿ!

**ನಾರದ**—ಬೇಸರಮಾಡಿಕೊಳ್ಳಬೇಡವಯ್ಯಾ!

**ಮಕರಂದ**—ಸ್ವಾಮೀ, ನಿಮ್ಮ ಚಪಲ ನಿಮಗೆ, ನನ್ನ ಅವಸ್ಥೆ ನನಗೆ. ಹೆಣ್ಣನ್ನು ಹುಡುಕಿಕೊಂಡು ಬೀದಿಬೀದಿ, ಸಂದಿಸಂದಿ, ಮನೆಮನೆ, ತಿರುಗುತ್ತಾ ಯಾರಾದರೂ ನಕ್ಕಾರೆಂಬುದನ್ನು ಸಹ ಲೆಕ್ಕಿಸದೆ, ಬೇಸರವಿಲ್ಲದೆ, ಎಲ್ಲೆಲ್ಲಿಯೂ ನೀವೇ ಅಲೆಯುತ್ತಿರುವಿರಿ. ಗ್ರಹಚಾರ ಕಡಿಮೆಯಾಗಿ ನಿಮ್ಮ ಜೊತೆಗೆ ಗಂಟು ಬಿದ್ದ ನಾನೂ ನಿಮ್ಮಂತೆ ಊರಲ್ಲೆಲ್ಲವೂ ಅಲೆದುದಾಯಿತು. ಕಾಲೆಲ್ಲವೂ ಉರಿಹತ್ತಿತು. ಹಸಿವೋ, ಅದರ ಕಥೆಯನ್ನೇನೆಂದು ಹೇಳಲಿ. ನಿಮ್ಮ ಜೊತೆಯಲ್ಲಿ ಅಲೆಯುತ್ತಾ ಈ ದಿನ

ಮಧ್ಯಾಹ್ನದ ಫಲಾಹಾರವೇ ತಪ್ಪಿಹೋಯಿತು, ಇದೆಲ್ಲವೂ ಹಾಗಿರಲಿ; ನಿಮ್ಮ ಮಾತನ್ನು ಕೇಳಿ ಈಗ ರುಕ್ಮಿಣೀದೇವಿಯ ಮನೆಗೆ ಬರುವಷ್ಟ ರಲ್ಲಿ ಆ ಪಕ್ಕದ ಮನೆಯ ಒಂದು ಹೋರಿಗರುವು ನೆಗೆದಾಡುತ್ತ ಓಡಿಬಂದು ನನ್ನ ಎರಡು ಕಾಲ್ಗಳ ಕೆಳಗೂ ತಲೆಯನ್ನು ಹಾಕಿ ಚಿಮ್ಮಿ ನನ್ನನ್ನು ಆಕಾಶಕ್ಕೆ ಹಾರಿಸಿಬಿಟ್ಟಿತ್ತು. ದೈವಕೃಪೆಯಿಂದ ಮೇಲಕ್ಕೆ ಹೋಗದೆ ಭೂಮಿಗೇ ಬಿದ್ದೆನು. ಬಿದ್ದ ಪೆಟ್ಟಿಗೆ ಮೂಳೆಗಳೆಲ್ಲವೂ ಪುಡಿ ಪುಡಿಯಾಗಬೇಕಾಗಿತ್ತು.

**ನಾರದ**—ಓಹೋ! ಹಾಗಾದರೆ ಅದು ಏತರಿಂದ ತಪ್ಪಿತು?

**ಮಕರಂದ**—ಇದೋ! ನಿಮ್ಮ ಜೊತೆಯಲ್ಲಿ ಅಲೆಯಬೇಕಾದ ನನ್ನ ಗ್ರಹಚಾರದಿಂದ.

**ನಾರದ**—ಅದಲ್ಲವಯ್ಯಾ! ಕಡೆಗೆ ರುಕ್ಮಿಣೀದೇವಿಯ ಮನೆಯಲ್ಲಿ ಸಮಾಚಾರವನ್ನು ತಿಳಿದು ಬಂದಿರುವೆಯೋ? ಅಥವಾ ಸುಮ್ಮನೆ ಬಂದುಬಿಟ್ಟೆಯೋ?

**ಮಕರಂದ**—(ಆತ್ಮ) ಸರಿ! "ಇವನು ಬಿದ್ದನಲ್ಲಾ! ಇವನ ಸ್ಥಿತಿಯೇನು ಗತಿಯೇನು" ಎಂಬುದೊಂದನ್ನೂ ವಿಚಾರಿಸದೆ, ಪುಣ್ಯಾತ್ಮನು ಮದುವೆಯಾತುರದಲ್ಲಿ ಮುಳುಗಿಹೋಗಿಬಿಟ್ಟಿರುವನು. (ಪ್ರಕಾಶಂ) ಸ್ವಾಮಿನ್! ಅದನ್ನು ತಿಳಿದು ಆತುರದಿಂದ ನಿಮಗೆ ತಿಳಿಸುವುದಕ್ಕಾಗಿಯೇ ಪೆಟ್ಟು ತಿಂದಿದ್ದರೂ ಲಕ್ಷಿಸದೆ ನಿಮ್ಮ ಬಳಿಗೆ ಓಡಿಬಂದದ್ದು.

**ನಾರದ**—ಬಹಳ ಸಂತೋಷ. ಹಾಗಾದರೆ ರುಕ್ಮಿಣೀದೇವಿಯು ಭವನದಲ್ಲಿರುವಳಷ್ಟೆ?

**ಮಕರಂದ**—ಇಲ್ಲ. ಉದ್ಯಾನಕ್ಕೆ ಹೋಗಿರುವಳೆಂದು ತಿಳಿಯಿತು.

**ನಾರದ**—ಓಹೋ! ಹಾಗಾದರೆ ನಿನಗೆ ಶ್ರಮವಾದರೂ ಚಿಂತೆಯಿಲ್ಲ. ಬಾ ಉದ್ಯಾನಕ್ಕೆ ಹೋಗಿ ನೋಡೋಣ.

**ಮಕರಂದ**—ಸರಿ! ನನಗೆ ಶ್ರಮವಾದರೂ ಚಿಂತೆಯಿಲ್ಲ; ನಿಮ್ಮ ಶ್ರಮ ತೀರಿದರೆ ಸಾಕಲ್ಲವೇ? ಹಾಗೆಯೇ ಆಗಲಿ ನಡೆಯಿರಿ. ಅಂತೂ ನಿಮ್ಮ ಕೈಗೆ ಸಿಕ್ಕಿದುದಕ್ಕೆ ಊರೆಲ್ಲೆಲ್ಲವೂ ಸುತ್ತಿಸಿ ನನ್ನನ್ನು ಗಂಧದ ಚಕ್ಕೆ ಯಂತೆ ಅರೆದುಬಿಟ್ಟಿರಿ. ಏನುಮಾಡುವುದು! ನನ್ನ ಗ್ರಹಚಾರ; "ಬೆಕ್ಕಿಗೆ ಚೆಲ್ಲಾಟ ಇಲಿಗೆ ಪ್ರಾಣಸಂಕಟ." ಇರಲಿ ನಡೆಯಿರಿ; ಉದ್ಯಾನಕ್ಕೆ ಹೋಗೋಣ.

**ನಾರದ**—ಆದರೆ, ನೀನು ಆಯಾಸಪಟ್ಟಿರುವೆ; ಆ ರುಕ್ಮಿಣೀದೇವಿಯು ಇರುವ ಸ್ಥಳವನ್ನು ತೋರಿಸಿ ನೀನು ಮನೆಗೆ ಹೋಗುವೆ ಬಾ; ಗಲಭೆ ಯನ್ನು ಮಾತ್ರ ಮಾಡಬೇಡ.

**ಮಕರಂದ**—ಗಲಭೆ ಮಾಡುವುದಕ್ಕೆ ನನಗೆ ಬರಲೇ ಬಾರದು. (ಹೋಗುವರು.)

## ದೃಶ್ಯ ೬. ಉಪವನ.

(ಶ್ರೀಕೃಷ್ಣ ರುಕ್ಮಿಣಿಯರು ವನವಿಹಾರದಲ್ಲಿರುವರು.)

**ಕೃಷ್ಣ**—ಕಂ|| ನವವಿಧಸುಮಸೌರಭದಿಂ |
೪೦ ಸುವಿಹಂಗಾರಾವದಿಂದಮಳಿಝೇಂಕೃತದಿಂ ||
ನವಿಲಾಡುವ ನವನಾಟ್ಯದಿ |
ನವಿರಳ ಮುದವೀವುದಲ್ತೆ ವನಮಿದು ಕಾಂತೇ || ೧೮ ||

ಪ್ರಿಯೇ! ರುಕ್ಮಿಣೀ! ಈ ಉದ್ಯಾನವು ಎಷ್ಟು ಮನೋಹರವಾಗಿರುವುದು!

**ರುಕ್ಮಿಣಿ**—ಇಲ್ಲಿಗೆ ಬಂದೊಡನೆಯೇ ಎಂತಹ ಬೇಸರವೂ ಪರಿಹಾರವಾಗು ವುದು. ಅಲ್ಲಿ ನೋಡು! ಆ ಗಿಳಿಗಳ ನುಡಿಗಳೋ! ಹಂಸೆಯ ನಡೆ ಗಳೋ! ಆ ಜಿಂಕೆಗಳ ನೋಟಗಳೋ! ಮಾವಿನ ಚಿಗುರುಗಳೋ! ಮಲ್ಲಿಗೆಯ ಮೊಗ್ಗುಗಳೋ! ಎಷ್ಟು ಮನೋಹರವಾಗಿರುವುವು!!

**ಕೃಷ್ಣ**—ರಮಣೀ! ನೀನಿವುಗಳನ್ನು ಹೊಸದಾಗಿ ವನದಲ್ಲಿ ನೋಡಿ ಆನಂದ ಪಡುತ್ತಿರುವೆ; ನನಗೆ ಮಾತ್ರ ಮನೆಯಲ್ಲಿದ್ದರೂ ಈ ನೀನು ಹೇಳಿದ ವಿಷಯಗಳೆಲ್ಲವೂ ನನ್ನೆದುರಲ್ಲಿಯೇ ಕಾಣುತ್ತಿರುವುವು.

**ರುಕ್ಮಿಣಿ**—ಮನೆಯಲ್ಲಿ ಗಿಳಿಗಳನುಡಿಗಳೂ, ಹಂಸೆಗಳ ನಡೆಗಳೂ ಇರುವುವೇ?

**ಕೃಷ್ಣ**—ಸಂದೇಹವೇನು!

ಕಂ|| ಶುಕವಾಣಿ ಹಂಸಗಾಮಿನಿ |
ಸುಕುರಂಗಾಲೋಕೆ ಪಲ್ಲವಾಧರೆ ಮಧುಪಾ ||
ಲಕೆ ಕುಂದರದನೆ ನಿನ್ನೊಳ್ |
ಪ್ರಕಟಿತಮಾಗಿರ್ಪುದಲ್ತೆ! ಈವನದಂದಂ || ೧೯ ||

ನೀನೇ ನನ್ನ ಕಣ್ಣಿಗೆ ಈ ವನಲಕ್ಷ್ಮಿಯಂತೆ ಕಾಣುತ್ತಿರುವೆ.

**ರುಕ್ಮಿಣಿ**—ಪ್ರಿಯಾ! ಸಮಯೋಚಿತವಾಗಿ ಹೀಗೆ ಮಾತನಾಡಿ ವಿನೋದ ಪಡಿಸುತ್ತಿರುವುದರಿಂದಲ್ಲವೇ ಇಷ್ಟುಮಂದಿ ರಮಣಿಯರು ಸದಾ ನಿನ್ನ ಸೇವೆಮಾಡಿ ನಿನ್ನ ಅನುಗ್ರಹವನ್ನು ಬಯಸುತ್ತಿರುವರು!

**ಕೃಷ್ಣ**—ಪ್ರಿಯೇ! ಇದು ಕೇವಲ ವಿನೋದಪಡಿಸುವುದಕ್ಕೋಸುಗ ಆಡಿದ ಮಾತೆಂದೆಣಿಸಬೇಡ. ನೋಡು, ಹಿಂದೆ ಶ್ರೀರಾಮಚಂದ್ರನು ಅರಣ್ಯ ವಾಸ ಮಾಡುತ್ತಿದ್ದರೂ ಪತ್ನಿಯಾದ ಸೀತಾದೇವಿಯು ಬಳಿಯಲ್ಲಿದ್ದುದ ರಿಂದ ಸಂತೋಷಚಿತ್ತನಾಗಿ, ಅರಣ್ಯದಲ್ಲಿಯೂ ಅರಮನೆಯಲ್ಲಿದ್ದಂತೆಯೇ ಆನಂದದಿಂದಿದ್ದನು. ಆಕೆಯನ್ನು ಕಳೆದುಕೊಂಡಮೇಲೆ ಎಷ್ಟು ಗೋಳಾ ಡಿದನು! ಆಗ ಯಾವ ಆನಂದವೂ ಆತನಿಗೆ ಬೇಕಿಲ್ಲವಾಯಿತು. ಆದುದ ರಿಂದ ಪ್ರಿಯತಮಳಾದ ಪತ್ನಿಯ ಸಹವಾಸದಿಂದ ಪುರುಷನಿಗೆ ವನವೂ ಸಹ ಮನೆಯಂತೆಯೇ ಮನಸ್ಸಿಗಾನಂದವನ್ನುಂಟುಮಾಡುವುದು. ಆತನು ಯಾವ ಮನೋಹರ ವಸ್ತುಗಳನ್ನು ನೋಡಿದರೂ ತನ್ನ ಪ್ರಿಯ ತಮಳ ಮೋಹನಾಕಾರವು ಚಿತ್ತದಲ್ಲಿ ಬಂದು ನಿಂತು, ಆತನಿಗೆ ಅವಳ ಮೇಲಣ ಪ್ರೇಮವನ್ನು ಮತ್ತೆಮತ್ತೆ ಉಕ್ಕಿಸುವುದು. ಆದುದರಿಂದ ಈ ವನದಂದವು ನಿನ್ನಲ್ಲಿ ನನಗೆ ಅತ್ಯನುರಾಗವನ್ನು ಉಕ್ಕಿಸಿತು. ಆದ ಕಾರಣ ಹಾಗೆ ಹೇಳಿದೆನು.

**ರುಕ್ಮಿಣಿ**—ಆರ್ಯಪುತ್ರಾ, ಆ ಸೀತಾರಾಮರ ಚರಿತ್ರವು ಅತಿ ಮನೋಹರವಾದುದೆಂದು ಕೇಳಿರುವೆನು. ಅದನ್ನು ದಯವಿಟ್ಟು ವಿಸ್ತಾರವಾಗಿ ಹೇಳಿದರೆ ಕೇಳಬೇಕೆಂದು ನನಗೆ ಬಹಳ ಕುತೂಹಲವುಂಟಾಗಿರುವುದು.

**ಕೃಷ್ಣ**—ಪ್ರಿಯೇ! ಇದು ಸಂಧ್ಯಾಕಾಲವು, ಈಗ ರಾಮಾಯಣ ಕಥೆಯನ್ನು ಕೇಳತಕ್ಕುದಲ್ಲ. ಆದುದರಿಂದ ಬೇರೆ ಸಮಯದಲ್ಲಿ ಹೇಳುವೆನು.

**ರುಕ್ಮಿಣಿ**—ಪ್ರಿಯಾ! ಒಂದುವೇಳೆ ಕೇಳಿದರೆ ಏನಾಗುವುದು?

**ಕೃಷ್ಣ**—ಅನರ್ಥವು ಸಂಭವಿಸುವುದು.

**ರುಕ್ಮಿಣಿ**—ಯಾರಿಗೆ?

**ಕೃಷ್ಣ**—ಕೇಳಿದವರಿಗೆ!

**ರುಕ್ಮಿಣಿ**—(ನಕ್ಕು) ಹೇಳುವುದಕ್ಕಿಷ್ಟವಿಲ್ಲದೆ ಹೀಗೆನ್ನುವೆ. ನಾನು ಬಲ್ಲೆನು.

**ಕೃಷ್ಣ**—ಹಾಗಾದರೆ ಬಂದುದನ್ನನುಭವಿಸಲು ಸಿದ್ಧಳಾಗುವೆಯೋ?

**ರುಕ್ಮಿಣಿ**—ಪ್ರಿಯಾ! ರಾಮಾಯಣ ಕಥೆಯನ್ನು ಕೇಳಿದರೆ ಬರುವುದು ಪುಣ್ಯವು. ಅದನ್ನು ಸಂತೋಷದಿಂದ ಅನುಭವಿಸಲು ಸಿದ್ಧಳಾಗಿಯೇ ಇರುವೆನು. ಅಲ್ಲದೆ ಆತುರಳಾಗಿಯೂ ಇರುವೆನು. ಆದುದರಿಂದ ಏನು ಬಂದರೂ ಬರಲಿ; ಆ ಕಥೆಯನ್ನು ಮಾತ್ರ ಈಗಲೇ ನನಗೆ ಹೇಳಲೇಬೇಕು.

**ಕೃಷ್ಣ**—ಹಾಗಾದರೆ ಆಗಬಹುದು.

**|| ಸೀಸಪದ್ಯ ||**

ಜಲಜಾಕ್ಷಿ ಕೇಳು ಕೋಸಲದೇಶಕರಸಾಗಿ ದಶರಥಾಂಕಿತ ರಾಜನೆಸೆದನಂದು |
ಪುತ್ರಕಾಮೇಷ್ಟಿಯಿಂ ಪುತ್ರರನು ನಾಲ್ವರನು ಪಡೆದನಾನಂದದಿಂ ಮಡದಿಯರೊಳು ||
ಹಿರಿಯನವರೊಳು ರಾಮ ಪರಮಕರುಣಾಧಾಮ ಜನಪವಂಶಲಲಾಮ ದನುಜಭೀಮ |
ಮುನಿಯಜ್ಞವನು ಕಾಯ್ದು ಮುನಿಸತಿಯ ತಾಂಪೊರೆದು ಸಹಜಾತ ಸೌಮಿತ್ರಿಸಹಿತಬಂದು ||

**ಗೀತ** || ಮಿಥಿಲೆಯೊಳು ವರಭೂಮಿಪತಿಜನಕನಿಟ್ಟ |
ಶಿತಿಕಂಠಚಾಪವನೆ ಶಿಥಿಲಮೆಸಗುತಲಿ ||
ಕ್ಷಿತಿಜಾತೆಯನು ವರಿಸಿ ಹಿತದೆ ನಿಜಪುರಿಗೆ |
ವಿತತಮುದದಿಂ ಬಂದನತುಳಶುಭಚರಿತ || ೨೧ ||

ತ್ರೇತಾಯುಗದಲ್ಲಿ ಕೋಸಲದೇಶದರಸನಾದ ದಶರಥನೆಂಬ ಚಕ್ರವರ್ತಿಯು ಬಹುದಿನಗಳು ಮಕ್ಕಳಿಲ್ಲದೆ ಇದ್ದು ಪುತ್ರಕಾಮೇಷ್ಟಿಯಾಗವನ್ನು ಮಾಡಿ ಶ್ರೀರಾಮ ಲಕ್ಷ್ಮಣ ಭರತ ಶತ್ರುಘ್ನರೆಂಬ ನಾಲ್ವರು ಪುತ್ರರನ್ನು ಪಡೆದನು.

**ರುಕ್ಮಿಣಿ**—ಅಹುದು, ಕೇಳಿಬಲ್ಲೆನು.

**ಕೃಷ್ಣ**—ರಾಮಲಕ್ಷ್ಮಣರನ್ನು ರಾಕ್ಷಸರ ವಧೆಗೆಂದು ಕರೆದುಕೊಂಡು ಹೋದ ವಿಶ್ವಾಮಿತ್ರನು ಅವರಿಗೆ ಅಸ್ತ್ರಶಸ್ತ್ರಕಲೆಗಳನ್ನು ಚೆನ್ನಾಗಿ ಬೋಧಿಸಿ ಮಿಥಿಲಾನಗರಕ್ಕೆ ಕರೆತಂದನು.

**ರುಕ್ಮಿಣಿ**—ಸರಿ, ಆಮೇಲೆ ?

**ಕೃಷ್ಣ**—ಅಲ್ಲಿ ಶ್ರೀರಾಮಚಂದ್ರನು, ವರಪರೀಕ್ಷೆಗಾಗಿ ಇಟ್ಟಿದ್ದ ಶಿವಧನುಸ್ಸನ್ನು ಮುರಿದು ಜನಕರಾಜನ ಪುತ್ರಿಯಾದ ಸೀತಾದೇವಿಯನ್ನು ಮದುವೆಯಾಗಿ ಅಯೋಧ್ಯೆಗೆ ಬಂದನು.

**ರುಕ್ಮಿಣಿ**—(ಸ್ಮರಣೆಯಿಂದ) ಅಹುದು, ನನ್ನನ್ನು ಮದುವೆಯಾದನು.

**ಕೃಷ್ಣ**—ಸೀತೆಯನ್ನು ಮದುವೆಯಾದನು.

**ರುಕ್ಮಿಣಿ**—ನಿಜ ! ನಿಜ ! ನನ್ನನ್ನೇ ಮದುವೆಯಾದನು !

**ಕೃಷ್ಣ**—(ಅಸ್ಫ) ಇವಳೇ ಆಗ ಸೀತಾದೇವಿಯಾಗಿ ಜನಿಸಿದ್ದಳಾದುದರಿಂದ, ಈ ಕಥೆಯನ್ನು ಕೇಳಿ ತಾನು ರುಕ್ಮಿಣಿಯೆಂಬುದನ್ನು ಮರೆತು ಸೀತೆಯೆಂದು ಭ್ರಾಂತಳಾಗಿರುವಳು. ಇರಲಿ, ಭ್ರಾಂತಿಯಿನ್ನೂ ಏರಲಿ. (ಪ್ರಕಾಶ) ಅನಂತರ, ಚಿಕ್ಕ ಹೆಂಡತಿಯಾದ ಕೈಕಾದೇವಿಗೆ ತನ್ನ ತಂದೆಯಾದ ದಶರಥನು ಕೊಟ್ಟಿದ್ದ ವರಗಳನ್ನು ಪಾಲಿಸಲು ರಾಮನು ತಂದೆಯಾಜ್ಞೆಯಂತೆ ಹದಿನಾಲ್ಕುವರ್ಷಗಳ ಅರಣ್ಯವಾಸಕ್ಕಾಗಿ ತಮ್ಮನಾದ ಲಕ್ಷ್ಮಣ ಮತ್ತು ಪತ್ನಿಯಾದ ಸೀತಾದೇವಿಯೊಡನೆ ಹೊರಟನು.

**ರುಕ್ಮಿಣಿ**—(ಸ್ಮರಣೆಯಿಂದ) ನಿಜ. ದಂಡಕಾರಣ್ಯಕ್ಕೆ ಬಂದೆವು.

**ಕೃಷ್ಣ**—ಅಲ್ಲಿ ಪಂಚವಟೀಕ್ಷೇತ್ರದಲ್ಲಿ ವಾಸಮಾಡಿಕೊಂಡು, ಒಂದಾನೊಂದು ದಿನ ಸೀತಾರಾಮರು ವಿನೋದದಿಂದ ಮಾತನಾಡುತ್ತಿದ್ದಾಗ, ಒಂದು ಸುಂದರವಾದ ಜಿಂಕೆಯು ಅಲ್ಲಿ ಸುಳಿದಾಡುತ್ತಿತ್ತು.

(ಮುಂದೆ ಜಿಂಕೆಯೊಂದು ಸುಳಿದಾಡುವುದು.)

**ರುಕ್ಮಿಣಿ**—(ಮುಂದೆ ನೋಡಿ) ಅಹುದು: ಅದೋ! ಅದೋ! ಜಿಂಕೆಯು! ಆಹಾ! ಎಷ್ಟು ಚೆನ್ನಾಗಿರುವುದು! ಪ್ರಿಯಾ! ಪ್ರಿಯಾ! ಶ್ರೀರಾಮಚಂದ್ರ! ವನದಲ್ಲಿರುವ ನನಗೆ ಇದರೊಡನೆ ಬೇಸರವನ್ನು ಕಳೆಯಲು ಬಹಳ ಚೆನ್ನಾಗಿರುವುದು. ಆದುದರಿಂದ ಬೇಗನೆ ಹೋಗಿ ಅದನ್ನು ಹಿಡಿದುಕೊಂಡು ಬಂದು ನನಗೆ ಕೊಡು.

**ಕೃಷ್ಣ**—(ಆತ್ಮ) ನಾನೇ ರಾಮನೆಂತಲೂ ತಾನೇ ಸೀತೆಯಂತಲೂ ಈಕೆಯ ಭಾವವು ವ್ಯತ್ಯಾಸವಾಗಿ, ತ್ರೇತಾಯುಗದಲ್ಲಿ ತಾನು ಅರಣ್ಯವಾಸಿನಿಯಾಗಿರುವೆನೆಂದು ತಿಳಿದು, ಈಕೆಯು ಭಾವದಲ್ಲಿ ಸೀತೆಯೇ ಆಗಿಬಿಟ್ಟಿರುವಳು. ಇರಲಿ! ವಿನೋದವನ್ನು ತೋರಿಸುವೆನು. (ಪ್ರಕಾಶ) "ಹಾಗೆಯೇ ಆಗಲಿ ತಂದುಕೊಡುವೆನು. ನೀನಿಲ್ಲಿಯೇ ಇರು." ಎಂದು ಹೇಳಿ ರಾಮನು ಹೋದಕೂಡಲೆ ರಾಕ್ಷಸನಾದ ರಾವಣನು ಸನ್ಯಾಸಿವೇಷದಿಂದಲ್ಲಿಗೆ ಬಂದನು. (ಕೃಷ್ಣನು ಹೋಗುವನು.)

**ರುಕ್ಮಿಣಿ**—ಓಹೋ ಹೋದನು; ನನ್ನ ಪ್ರಿಯನಾದ ಶ್ರೀರಾಮಚಂದ್ರನು ಸುವರ್ಣಮೃಗವನ್ನು ತರಲು ಹೋದನು. ಇನ್ನು ಆ ಮೃಗವನ್ನು ಬೇಗನೆ ತರುವನು. ಅದರೊಡನೆ ಆಡುತ್ತಾ ನಾನೀ ಅರಣ್ಯದಲ್ಲಿ ಬೇಸರವನ್ನು ಕಳೆಯುವೆನು. ೪೧

(ಮಕರಂದ ನಾರದರು ಪ್ರವೇಶಿಸುವರು.)

**ಮಕರಂದ**—ಅದೋ! ನಾರದರೇ! ರುಕ್ಮಿಣಿಯು ಒಬ್ಬಳೇ ಇರುವಳು. ಕೃಷ್ಣನಿಲ್ಲ. ನಿಮ್ಮ ರೊಟ್ಟಿ ತುಪ್ಪದಲ್ಲಿ ಬಿತ್ತು. ಬೇಗನೆ ಹೋಗಿ, ತಡವು ಮಾಡಬೇಡಿ; ಆಕೆಯನ್ನು ಪ್ರಾರ್ಥಿಸಿ. ಕೃಷ್ಣನು ಬಂದು ಬಿಟ್ಟಾನು!

**ಮನ್ಮಥ**—(ಮರೆಯಲ್ಲಿ ಇಂದ್ರನೊಡನೆ ಪ್ರವೇಶಿಸಿ) ಮಹೇಂದ್ರಾ! ನೋಡು! ನಾರದನ ಅವಸ್ಥೆಯನ್ನು. ನನ್ನ ಶರಾಹತಿಗಳಿಂದ ಭ್ರಾಂತನಾಗಿ ರುಕ್ಮಿಣಿಯಲ್ಲಿ ಕನ್ಯೆಯನ್ನು ಯಾಚಿಸಲು ಬಂದಿರುವನು. ಈಗಲೀಗ ವಿನೋದ!

**ಇಂದ್ರ**—ಭಲಾ! ಮನ್ಮಥ! ಶೂರನೆಂದರೆ ನೀನೇ! ಈ ಮರೆಯಲ್ಲಿದ್ದು ನೋಡುವ. (ಮರೆಯಲ್ಲಿ ನಿಲ್ಲುವರು.)

**ನಾರದ**—(ರುಕ್ಮಿಣಿಯ ಬಳಿಗೆ ವೇಗವಾಗಿ ಬಂದು) ಎಲೌ! ಸಾಧ್ವೀಮಣೀ! ೪೨

**ರುಕ್ಮಿಣಿ**—(ಭಯಭ್ರಾಂತಳಾಗಿ) ಅಯ್ಯೋ! ನೀಚರಾವಣನು! ಸನ್ಯಾಸಿ ವೇಷದಿಂದ ಬಂದನು. ಹಾ! ರಾವಣನು! ರಾಕ್ಷಸನು! ಅಯ್ಯೋ!

(ಓಡಿಓಡಿ ಮೂರ್ಛೆ ಬೀಳುವಳು.)

**ಸೇವಕರು**—ಎಲ್ಲಿ? ಎಲ್ಲಿ? ರಾಕ್ಷಸನೆಲ್ಲಿ? ಬನ್ನಿ ಬನ್ನಿ! ನೀಚನನ್ನು ಧ್ವಂಸ ಮಾಡೋಣ. (ಓಡುವ ನಾರದನನ್ನಟ್ಟಿಕೊಂಡು ಹೊಡೆಯಲು ಹೋಗುವರು.)

**ಮಕರಂದ**—ನಾನು ಹೋಗಿ ರಾವಣನು ಬಂದನೆಂದು ಹೇಳಿ ಸಖಿಯರನ್ನು ಕಳುಹಿಸಿ ಮೂರ್ಛೆಬಿದ್ದಿರುವ ರುಕ್ಮಿಣೀದೇವಿಗೆ ಉಪಚಾರ ಮಾಡಿಸುವೆನು. (ಹೋಗುವನು.)

**ಇಂದ್ರ**—ಮದನಾ! ನಿನ್ನ ಸಾಹಸದ ಮುಂದೆ ಯಾರ ಸಾಹಸವೂ ಅಲ್ಲ. ಅಂಥ ನಾರದಮಹಾನಿಯನ್ನು ಇಂಥ ಅವಸ್ಥೆಗೆ ಸಿಕ್ಕಿಸಿ, ಹುಚ್ಚನಂತೆ ಕುಣಿಸುತ್ತಿರುವೆಯಲ್ಲಾ! ಭಲಾ! ನಿನ್ನ ಬಾಣಗಳು ಹೆಸರಿಗೆ ಮಾತ್ರ ಪುಷ್ಪಗಳು, ಬಿಟ್ಟರೆ ಸಿಡಿಲೇ ನಿಜ.

**ಮನ್ಮಥ**—ಮಹೇಂದ್ರಾ! ನಾನು ಆ ರೀತಿಯಾಗಿ ಅಹಂಕಾರಪಡಲಾರೆನು. ಮುಖ್ಯವಾಗಿ ನಾರದನು ನಿನಗೆ ಮಾಡಿದ ಅಪಮಾನಕ್ಕೆ ತಕ್ಕ ಪ್ರತಿಕ್ರಿಯೆಯಾಯಿತಲ್ಲವೇ?

**ಇಂದ್ರ**—ಓಹೋ! ಬಹಳ ಚೆನ್ನಾಗಿ ಆಯಿತು. ಇನ್ನು ಇಲ್ಲಿಯೇ ಅದೃಶ್ಯರಾಗಿದ್ದು ಇದರ ಪರ್ಯವಸಾನವನ್ನು ನೋಡೋಣ. (ಹೋಗುವರು.)

## ದೃಶ್ಯ ೭—ಉದ್ಯಾನದ ಮತ್ತೊಂದು ಭಾಗ.

**ನಾರದ**—(ಓಡಿ ಓಡಿ ಬಂದು ಘಾಸಿಯಿಂದ) ಅಯ್ಯೋ! ಅಯ್ಯೋ! ಗ್ರಹಚಾರವೇ! ಮಾತನಾಡುವುದಕ್ಕೆ ಮುಂಚೆಯೇ ರುಕ್ಮಿಣಿಯು ನನ್ನನ್ನು ನೋಡಿ ಓಡಲಾರಂಭಿಸಿದಳು. ಸೇವಕರಂತೂ ನನ್ನನ್ನು ಮೈಮುರಿಯುವಂತೆ ಹೊಡೆಯಲು ಅಟ್ಟಿಕೊಂಡೋಡಿ ಬಂದರು. ದೈವಯೋಗದಿಂದ ತಪ್ಪಿಸಿಕೊಂಡು ಇಲ್ಲಿಗೆ ಬಂದು ಅವಿತುಕೊಂಡೆನು. ಆ ವೀರರಿಂದ ಒಂದು ಪೆಟ್ಟು ನನಗೆ ಬಿದ್ದಿದ್ದರೂ ನಾನು ಧ್ವಂಸವೇ ಆಗುತ್ತಿದ್ದೆ. (ಪಕ್ಕದಲ್ಲಿ ನೋಡಿ) ಅದೋ! ಅದೋ! ಇನ್ನೂ ನೂರಾರು ಜನರು ಆಯುಧಪಾಣಿಗಳಾಗಿ ಅಟ್ಟಿಕೊಂಡೇ ಬರುವಂತೆ ಕಾಣುವುದು. ಇನ್ನೆಲ್ಲಿ ಹೋಗಲಿ! ಅಯ್ಯೋ! ಕೃಷ್ಣಾ!! ಏನು ಮಾಡಲಿ. (ಮುಂದೆ ನೋಡಿ) ಓಡಿ ಹೋಗಿ ಅಲ್ಲಿ ಕಾಣುವ ಶಿಲಾಮಂಟಪದಲ್ಲಿ ಅಡಗಿಕೊಂಡು ಒಳಗೆ ಅಗುಣಿಯನ್ನು ಹಾಕಿಕೊಳ್ಳುವೆನು. (ಓಡಿಹೋಗುವನು.)

## ದೃಶ್ಯ ೮—ಶ್ರೀಕೃಷ್ಣ ಸತ್ಯಭಾಮೆಯರು ಅರಮನೆಯಲ್ಲಿ ಮಾತನಾಡುತ್ತಿರುವರು.

**ಸತ್ಯಭಾಮೆ**—ಪ್ರಿಯಾ! ಸಂಸಾರಸುಖಾತುರರಾಗಿ ಬಂದ ನಾರದರನ್ನೆಲ್ಲಿಗೆ ಕಳುಹಿಸಿದೆ?

**ಕೃಷ್ಣ**—ನಾರದರು ನಮ್ಮ ನಾರಿಯರ ಮನೆಗಳೆಲ್ಲವನ್ನೂ ಪ್ರವೇಶಿಸಿ ನೋಡಿದರು. ನಾನು ಎಲ್ಲ ಕಡೆಗಳಲ್ಲಿಯೂ ಇದ್ದೆನು. ಅದರಿಂದ ಊರೆಲ್ಲವನ್ನೂ ಸುತ್ತಿ, ಕಡೆಗೆ ಉದ್ಯಾನದಲ್ಲಿರುವ ರುಕ್ಮಿಣಿಯನ್ನು ಕಾಣಲು ಅಲ್ಲಿಗೆ ಹೋಗುತ್ತಿರುವರು.

**ಸತ್ಯಭಾಮೆ**—ಓಹೋ! ಹಾಗಾದರೆ ಮುಂದೆ ಬಹಳ ವಿನೋದವೇ ಆಗಬಹುದಲ್ಲವೇ?

**ಕೃಷ್ಣ**—ಮುಂದೆ ಆಗುವ ವಿನೋದಗಳಿರಲಿ ; ಇದುವರೆಗೆ ಏನೇನು ವಿಚಿತ್ರ ಗಳಾಗಿವೆಯೋ ! ಮಕರಂದನು ಬಂದರೆ ತಿಳಿಯುವುದು.

**ಸತ್ಯಭಾಮೆ**—ಆದರೆ ಮಕರಂದನೂ ಅವರ ಒಳಿಯಲ್ಲಿಯೇ ಇರುವನೇನು ?

**ಕೃಷ್ಣ**—ನಾರದರ ಹುಚ್ಚನ್ನು ಹೆಚ್ಚಿಸುವುದಕ್ಕೆ ನಾನೇ ಸಂಧಾನವನಾಗಿ ಮಕರಂದನನ್ನು ಅವರ ಜೊತೆಯಲ್ಲಿಯೇ ಕಳುಹಿಸಿರುವೆನು.

**ಮಕರಂದ**—(ಓಡಿಬಂದು) ಕೃಷ್ಣಾ ! ಕೃಷ್ಣಾ ! (ನಗುತ್ತಾ ನಿಲ್ಲುವನು )

**ಸತ್ಯಭಾಮೆ**—ಅದೋ ! ಏನೋ ವರ್ತಮಾನವನ್ನು ತಂದನು. ಏನೋ ! ಮಕರಂದಾ ! ಹೀಗೆ ನಗುತ್ತಿರುವೆ ? ಉದ್ಯಾನದಲ್ಲಿ ಏನೇನು ನಡೆಯಿತು ?

**ಮಕರಂದ**—ಏನೆಂದು ಹೇಳಲಿ: ನಾರದರು ರುಕ್ಮಿಣೀದೇವಿಯನ್ನು ಕಂಡು ಮಾತನಾಡಲು ಒಳಗೆ ಹೋದರು. ಅಷ್ಟರಲ್ಲಿಯೇ ರುಕ್ಮಿಣೀದೇವಿಯು ರಾವಣಾಸುರನು ಸನ್ಯಾಸಿವೇಷದಿಂದ ಬಂದನೆಂದು ಬೆದರಿ ಕಿರಿಚಿಕೊಂಡು ಓಡಾಡಿ ಮೂರ್ಛೆ ಬಿದ್ದಳು. ಆಗ ವನಪಾಲಕರು ದೊಣ್ಣೆಗಳನ್ನೆತ್ತಿಕೊಂಡು ರಾಕ್ಷಸನನ್ನು ಧ್ವಂಸಮಾಡುತ್ತೇವೆಂದು ನಾರದರನ್ನಟ್ಟಿಕೊಂಡು ವನದಲ್ಲೆಲ್ಲ ಆ ಬಡಮುನಿಯನ್ನು ಓಡಾಡಿಸಿಬಿಟ್ಟರು. ನಾರದರು ಹೇಳುವುದೇಳುವುದನ್ನು ಕಾಣದೆ, ಬದುಕಿದರೆ ಸಾಕೆಂದು ಬೇಗನೆ ಓಡಿಹೋಗಿ ಆ ಶಿಲಾಮಂಟಪದಲ್ಲಿ ಸೇರಿಕೊಂಡು ಅಗಣಿಯನ್ನು ಹಾಕಿಕೊಂಡುಬಿಟ್ಟರು. ಆಗ ಸೇವಕರು, ಗುಂಪು ಗುಂಪಾಗಿ ಓಡಿಹೋಗಿ, ರಾವಣಾಸುರನು ಬಂದಿರುವನೆಂದು ಬಲರಾಮದೇವರಿಗೆ ತಿಳಿಸಿದರು ! ಮಿತಿಮಿರಿದ ಮಧುಪಾನಾನಂದದಲ್ಲಿದ್ದ ಬಲರಾಮನು, ರಾವಣನು ಬಂದನೆಂಬ ವಾರ್ತೆಯನ್ನು ಕೇಳಿದೊಡನೆಯೇ ನಿಜವೆಂದು ನಂಬಿ, ರೋಷಾವೇಶದಿಂದ ಹಾರಿಬಿದ್ದು, ಸೈನ್ಯವನ್ನು ಸಿದ್ಧಪಡಿಸುವಂತೆ ಆಜ್ಞೆಮಾಡಿ, ತಾನು ಹಲಾಯುಧವನ್ನೂ ಮುಸಲವನ್ನೂ ತಿರುಗಿಸುತ್ತಾ ಯುದ್ಧಸನ್ನದ್ಧನಾಗಿ, ಹೊರಟು, ನಿನ್ನನ್ನು ಹುಡುಕುವಂತೆ ಸೇವಕರೊಡನೆ ಹೇಳಿಕಳುಹಿಸಿದನು. ನೀನೆಲ್ಲಿಯೂ ಸಿಕ್ಕಲಿಲ್ಲವೆಂದು ಕೆಲವರು ಬಂದು ಹೇಳಿದರು. ಆಗ ಆತನ

ಕೋಪವು ಮತ್ತಷ್ಟು ಉಕ್ಕಿ, ಪ್ರಳಯಕಾಲದ ರುದ್ರನಂತೆ ಕಣ್ಣುಗಳಿಂದ ಕೆಂಡಗಳನ್ನು ಸುರಿಸುತ್ತಾ ಇತ್ತಲೇ ಬರುತ್ತಿರುವನು.

**ಸತ್ಯಭಾಮೆ**—ಪ್ರಿಯಾ, ಏನೀ ಅನರ್ಥವು? ನಾರದರನ್ನು ನೋಡಿ ರುಕ್ಮಿಣಿಯು ರಾವಣಾಸನ್ಯಾಸಿಯೆಂದು ಬೆದರಿಬೀಳಲೇನು ಕಾರಣ? ಎಂದೋ ಮಡಿದುಹೋದ ರಾವಣನು ಬಂದನೆಂದು ಅವಿವೇಕದಿಂದ ಸೇವಕರು ಬಂದು ಹೇಳಿದರೆ, ಅದನ್ನು ಅಂತಹ ಬುದ್ಧಿಶಾಲಿಯಾದ ಭಾವನವರು ಹೇಗೆ ನಂಬಿದರು? ಇದೇನೋ ಈ ವಿಚಿತ್ರವೊಂದೂ ನನಗೆ ಅರ್ಥವಾಗಲೇ ಇಲ್ಲವಲ್ಲಾ! ಭಾವನವರು ವಿವೇಚನೆಯಿಲ್ಲದೆ ಒಂದು ವೇಳೆ ನಾರದರ ಮೇಲೆ ಕೈಮಾಡಿದರೆ ಗತಿಯೇನು?

**ಕೃಷ್ಣ**—ಭಾಮೇ, ನೀನು ಕಾತರಪಡಬೇಡ. ಇದೇ **ನಾರದವಿನೋದ ನಾಟಕದ** ಕಡೆಯ ಅಂಕವು. ನಾರದರು "ನಿನ್ನ ಮಾಯೆಗೆ ನಾನು ಸಿಕ್ಕತಕ್ಕವನಲ್ಲ" ವೆಂದು ಅನೇಕಾವೃತ್ತಿ ನನ್ನೊಡನೆ ಹೇಳಿದ್ದರು. ಆದಕಾರಣ ಅವರನ್ನು ನನ್ನ ಮಾಯೆಗೆ ಸಿಕ್ಕಿಸಲು ಸಮಯವನ್ನು ಕಾಯುತ್ತಿದ್ದೆನು. ಈಗ ಸಮಯವು ಸಿಕ್ಕಿದುದರಿಂದ, ಇಂದ್ರಮನ್ಮಥರಿಂದ ನಾಟಕವನ್ನಾರಂಭಮಾಡಿಸಿ ನಾರದರಿಗೆ ಸ್ವಲ್ಪ ಮಾಯೆಯನ್ನು ಮುಚ್ಚಿದೆನು; ಅಲ್ಲದೆ ಈಗ ಕೆಲವು ದಿನಗಳಿಂದ ರುಕ್ಮಿಣಿಯು ನನ್ನೊಡನೆ ಸ್ವಲ್ಪ ಮೂರ್ಖತನದಿಂದ ವರ್ತಿಸುತ್ತಾ ಬಂದಿದ್ದಳು; ಆದುದರಿಂದ ಆ ಮೂರ್ಖತನಕ್ಕೂ ಅಣ್ಣನ ಮದ್ಯಪಾನದ ದುರಭ್ಯಾಸಕ್ಕೂ ತಕ್ಕ ಫಲವನ್ನು ಕೊಟ್ಟು, ನಾರದರಿಗೂ ಅಣ್ಣನಿಗೂ ರುಕ್ಮಿಣಿಗೂ ಬುದ್ಧಿಗಲಿಸುವುದಕ್ಕಾಗಿ ನಾನು ಒಂದು ವಿಚಿತ್ರಸಂಧಿಯನ್ನು ಕಲ್ಪಿಸಿ, ಆ ನಾಟಕವನ್ನು ಮುಂದುವರಿಸಿದೆನು. ಈ ವಿನೋದವನ್ನು ನೋಡಲು ಮಹೇಂದ್ರನೂ, ಮನ್ಮಥನೂ, ಬಂದು ಕಾದಿರುವರು. ನೀನು ಸಖಿಯರೊಡನೆ ಉದ್ಯಾನಕ್ಕೆ ಬಾ. ನಾನು ಅಣ್ಣನೊಡನೆ ಮಾತನಾಡುತ್ತಾ ಆತನನ್ನೂ ಅಲ್ಲಿಗೆ ಕರೆದುಕೊಂಡು ಬರುವೆನು. ಅಲ್ಲಿನಡೆಯುವ ವಿನೋದವನ್ನು ನೀನೂ ನೋಡುವೆ.

**ಸತ್ಯಭಾಮೆ**—ಪ್ರಿಯಾ! ನಿನ್ನ ಕಪಟನಾಟಕವಿನೋದವು ಅತಿವಿಚಿತ್ರ ವಾದುದು. ಹಾಗೆಯೇ ಆಗಲಿ. ನಾನು ಬೇಗನೆ ಬರುವೆನು.

**ಕೃಷ್ಣ**—ಮಕರಂದಾ! ಬಾ! ಅಣ್ಣನನ್ನು ನೋಡೋಣ. ನೀನು ಮಾತ್ರ ಗುಟ್ಟನ್ನು ಹೊರಪಡಿಸಿ ಹುಚ್ಚುಹುಚ್ಚಾಗಿ ಹರಟೀಯೆ! ಎಚ್ಚರಿಕೆ!

**ಮಕರಂದ**—ಅಯ್ಯಯ್ಯೋ! ನನಗೇನು ಬುದ್ಧಿ ಇಲ್ಲವೇ! ಕೃಷ್ಣಾ! ನಾನೇ ನಾದರೂ ನಿನ್ನ ಮಾತನ್ನು ಮೀರಿದರೆ ನನಗೇನು ರಗಳೆಯನ್ನು ಹಚ್ಚಿ ಬಿಡುವೆಯೋ ಎಂದು ನನಗೀಗಲೇ ಎದೆ ಢವಢವನೆ ಬಡಿದುಕೊಳ್ಳು ತ್ತಿರುವುದು. ಹೀಗಿರುವಲ್ಲಿ ಈ ಗುಟ್ಟನ್ನು ಬಿಟ್ಟೇನೆ. ಖಂಡಿತವಾಗಿಯೂ ಬಿಡುವುದಿಲ್ಲವಪ್ಪಾ!

**ಕೃಷ್ಣ**—ಸರಿ! ಬಾ. ಹೋಗೋಣ. (ಹೋಗುವರು.)

## ದೃಶ್ಯ ೯—ಉದ್ಯಾನಕ್ಕೆ ಹೋಗುವ ಮಾರ್ಗ.

(ಬಲರಾಮನು ಕೋಪದಿಂದ ವೀರಭಟರೊಡನೆ ಪ್ರವೇಶಿಸುವನು.)

**ಬಲರಾಮ**—ಕಂ|| ಬಿಡುವೆಂ ಶರಚಾಲವನಾಂ|
೪೩ ಕಡಿದಿಡುವೆಂ ಪೊಡವಿಗಿಂದು ಖಳರಾವಣನಂ ||
ಸುಡುವೆಂ ರಾಕ್ಷಸವಂಶವ |
ಪಡೆವೆಂ ದಿಕ್ತಟವಿರಾಜಿತಾಮಳಯಶಮಂ || ೨೨ ||

ಎಲ್ಲಿ? ಎಲ್ಲಿರುವನು? ಆ ಭ್ರಷ್ಟ ದಶಕಂಠನು! ಅವನಿಗೆ ನಮ್ಮ ಪುರಕ್ಕೆ ಬರುವಷ್ಟು ಧೈರ್ಯವೇ? ಅಧಮಾ! ಅವಿವೇಕೀ! ಪ್ರಬಲ ಬಲಾನ್ವಿತನಾದ ಈ ಬಲಭದ್ರನ ಹಲಾಯುಧಪ್ರಹರಗಳ ರುಚಿಯನ್ನು ನೋಡಲು ಮದಿಸಿಬಂದೆಯಾ? ಈ ವೀರಬಲರಾಮನು ನಿನ್ನನ್ನೂ ನಿನ್ನ ಲಂಕಾನಗರವನ್ನೂ ಒಂದೇ ಒಂದುಬಾಣದಿಂದ ಉರಿಸಿ ಭಸ್ಮ ಮಾಡಬಲ್ಲ ಶೂರನೆಂಬುದನ್ನು ಮರೆತುಬಿಟ್ಟೆಯಾ? (ಸುತ್ತಲೂನೋಡಿ) ಕೃಷ್ಣನು ಎಲ್ಲಿ ಹೋದನೋ ಬರಲೇ ಇಲ್ಲವಲ್ಲಾ!

**ಸೇವಕ**—(ಪ್ರವೇಶಿಸಿ) ಮಹಾಸ್ವಾಮಿ! ಅವರು ಇರತಕ್ಕ ಮನೆಗಳೆಲ್ಲ ವನ್ನೂ ಹುಡುಕಿದುದಾಯಿತು. ಎಲ್ಲಿಯೂ ಸಿಕ್ಕಲಿಲ್ಲ. ಉದ್ಯಾನ ದಲ್ಲಿಯೂ ಇಲ್ಲ.

(ಕೃಷ್ಣ ಮಕರಂದರು ಪ್ರವೇಶಿಸಿ ಮರೆಯಲ್ಲಿ ಕೇಳುತ್ತ ನಿಲ್ಲುವರು.)

**ಬಲರಾಮ**—ಆ ಅವಿವೇಕಿಯು ಇಂಥ ಸಮಯಗಳಲ್ಲಿ ಹೀಗೆ ಕೈಗೆ ಸಿಕ್ಕದೆ ತಪ್ಪಿಸಿಕೊಳ್ಳುವನು. ಏನುಮಾಡುವುದು! ಅವನ ಹುಡುಗತನವು ಇನ್ನೂ ತಪ್ಪಲಿಲ್ಲ. ಎಲವೋ! ಸೇವಕರಿರಾ! ಮತ್ತೊಂದಾವೃತ್ತಿ ನೀವುಗಳೆಲ್ಲರೂ ನಮ್ಮ ನಗರದಲ್ಲಿ ಎಲ್ಲಾ ಸ್ಥಳಗಳಲ್ಲಿಯೂ ಹುಡುಕಿ ಆ ಕೃಷ್ಣನು ಸಿಕ್ಕಿದರೆ ಬಿಡದೆ ಕರೆತರಬೇಕು. ಇಲ್ಲವಾದರೆ ನಿಮ್ಮನ್ನು ಶೂಲಕ್ಕೆ ಹಾಕಿಸುವೆನು.

**ಸೇವಕರು**—ಅಪ್ಪಣೆ.

**ಮಕರಂದ**—(ಓಡಿಬಂದು) ಸ್ವಾಮಿ! ಕೃಷ್ಣನನ್ನು ನಾನು ಕರೆದುಕೊಂಡು ಬಂದಿರುವೆನು. ಇದೋ! ಇಲ್ಲಿಯೇ ಇರುವನು.

**ಬಲರಾಮ**—ಬಂದನೇ ಕೃಷ್ಣನು? ಎಲ್ಲಿ? ಎಲ್ಲಿರುವನು?

**ಕೃಷ್ಣ**—(ಮುಂದೆ ಬಂದು) ಅಣ್ಣಾ! ನಮಸ್ಕರಿಸುವೆನು.

**ಬಲರಾಮ**—ಓಹೋ! ದಯಮಾಡಿಸಬೇಕಯ್ಯಾ, ದಯಮಾಡಿಸಬೇಕು! ನಮಸ್ಕಾರವಂತೆ! ನಮಸ್ಕಾರ!

**ಕೃಷ್ಣ**—ಏತಕ್ಕೆ ಅಣ್ಣಾ! ನನ್ನ ಮೇಲೆ ಇಷ್ಟು ಆಗ್ರಹವು? ಸಮಾಚಾರವೇನು?

**ಬಲರಾಮ**—ನಿನಗೆ ಸಮಾಚಾರವು ಹೇಗೆ ತಿಳಿದೀತು! ರಾಜ್ಯಭಾರಕ್ರಮ ಗಳೇನಾದರೂ ನಿನಗೆ ಬೇಕಾಗಿದ್ದಲ್ಲಿ ಸಮಾಚಾರವು ತಿಳಿಯುತ್ತಿತ್ತು.

**ಕೃಷ್ಣ**—ಅಣ್ಣಾ! ನಾನು ಯಾವ ವಿಷಯದಲ್ಲಿಯೂ ಉದಾಸೀನನಾಗಿಲ್ಲ ವಲ್ಲಾ! ವಿಚಾರವೇನು? ವಿವರವಾಗಿ ಹೇಳಬಾರದೇ?

**ಬಲರಾಮ**—ಹೇಳುವುದೇನು? ನಮ್ಮ ಉಪವನಕ್ಕೆ ರಾವಣಾಸುರನು ಬಂದಿರುವನು. ಅದು ನಿನ್ನ ಕಿವಿಗೆ ಬೀಳಲೇ ಇಲ್ಲವೇನೋ ಪಾಪ!

**ಕೃಷ್ಣ**—ಏನು ! ರಾವಣಾಸುರನೇ ? ರಾವಣನು ? ದಶಕಂಠನು ?

**ಬಲರಾಮ**—ಅಹುದಯ್ಯಾ ! ಅಹುದು. ರಾವಣನೇ ! ಲಂಕಾಧಿಪತಿಯಾದ ರಾವಣನು ; ದಶಕಂಠನು. ತಿಳಿಯಿತೇ ?

**ಕೃಷ್ಣ**—ಅಣ್ಣಾ ! ರಾವಣನು ಹೇಗೆ ಬಂದನು ?

**ಬಲರಾಮ**—ಹೇಗೆ ಬಂದನೇ ! ನಡೆದುಕೊಂಡು ಬಂದನು. ತಿಳಿಯಿತೇ ? ಒಳ್ಳೆಯ ಹುಡುಗ ಸಹವಾಸವಾಯಿತಲ್ಲಾ ! ಅವನು ಬಂದುದು ಮಾತ್ರವೇ ಅಲ್ಲ !

**ಕೃಷ್ಣ**—ಮತ್ತೇನನ್ನು ಮಾಡಿದನು ?

**ಬಲರಾಮ**—ಏನನ್ನೇ ! ರುಕ್ಮಿಣಿಯನ್ನ ಪಹರಿಸಿಕೊಂಡುಹೋಗಲು ಸನ್ಯಾಸಿಯಂತೆ ಬಂದು ಆಕೆಯನ್ನು ಮಾತನಾಡಿಸಿದನು.

**ಕೃಷ್ಣ**—ಏನು ! ನಮ್ಮ ರುಕ್ಮಿಣಿಯನ್ನೇ ?

**ಬಲರಾಮ**—ಅಹುದಯ್ಯಾ ! ನಮ್ಮ ರುಕ್ಮಿಣೀದೇವಿಯನ್ನೇ ! ನಿನ್ನ ಪತ್ನಿಯನ್ನು. ತಿಳಿಯಿತೇ ?

**ಕೃಷ್ಣ**—ಆಶ್ಚರ್ಯ ! ಪರಮಾಶ್ಚರ್ಯ ! ಆದರೆ ಇದೆಲ್ಲವನ್ನೂ ನೀನೇ ನೋಡಿದೆಯೇನು !

**ಬಲರಾಮ**—ನಾನೇ ನೋಡಬೇಕೇ ! ನಮ್ಮ ಸೇವಕರು ಇದೆಲ್ಲವನ್ನೂ ನೋಡಿ ಬಂದು ಹೇಳಿದರು. ರುಕ್ಮಿಣಿಯಂತೂ ಬೆದರಿ........

**ಮಕರಂದ**—ಅಹುದು ಕೃಷ್ಣಾ ! ಆಕೆಯು ದೇಹಾಲಸ್ಯದಿಂದ ತಪಿಸುತ್ತಿದ್ದುದನ್ನು ನೋಡಿ, ಆಕೆಯನ್ನು ಪಚರಿಸಲು ನಾನೇ ಸಖಿಯರನ್ನು ಕಳುಹಿಸಿದೆನು.

**ಬಲರಾಮ**—ನೋಡಿದೆಯಾ ! ಮಕರಂದನಿಗೆ ತಿಳಿದ ವಿಷಯವು ಸಹ ನಿನಗೆ ತಿಳಿಯದು. ಇನ್ನು ಗೃಹಕೃತ್ಯದಲ್ಲಿ ನಿನಗೆಷ್ಟು ಗಮನವಿರುವುದೆಂದು ಹೇಳಲಿ !

**ಕೃಷ್ಣ**—ಅಣ್ಣಾ ! ರಾವಣನನ್ನು ಕಂಡವರು ಯಾರು ? ಎಲವೋ ! ಸೇವಕರಿರಾ ನೀವಾತನ ಮುಖವನ್ನು ನೋಡಿದಿರೇನೋ !

**೧ನೆಯ ಸೇವಕ**—ನಾನು ವನಕ್ಕೆ ಒಬ್ಬ ಮುನಿ ಬಂದುದನ್ನು ನೋಡಿದೆನು.

**೨ನೆ ಸೇವಕ**—ಸ್ವಾಮಿಾ! ಆತನು ಓಡುವ ರಭಸದಲ್ಲಿ ಜಡೆಗಳ ಗಂಟು ಬಿಚ್ಚಿಕೊಂಡಿದ್ದುದನ್ನು ನಾನು ನೋಡಿದೆನು.

**೩ನೆ ಸೇವಕ**—ಕೈಯಲ್ಲಿ ಜಪಸರವಿದ್ದುದನ್ನು ನಾನು ನೋಡಿದೆನು.

**೪ನೆ ಸೇವಕ**—ಸ್ವಾಮಿಾ! ರುಕ್ಮಿಣೀದೇವಿಯರನ್ನು ಕೂಗುತ್ತಾ ಬಂದುದನ್ನು ನಾನು ನೋಡಿದೆನು.

**೫ನೆ ಸೇವಕ**—ರಾವಣನು ಬಂದನೆಂದು ರುಕ್ಮಿಣೀದೇವಿಯರು ಕೂಗಿಕೊಂಡುದನ್ನು ನಾನು ಕಿವಿಯಿಂದ ಕೇಳಿದೆನು.

**೬ನೆ**—ಸ್ವಾಮಿಾ! ನಾವುಗಳು ಅಟ್ಟಿಕೊಂಡು ಹೋದಾಗ, ಆತನು ಮುಂದೆ ಜಾರಿಬಿದ್ದು ಮತ್ತೆ ಎದ್ದು ಓಡಿಹೋದುದನ್ನು ನಾನು ನೋಡಿದೆನು.

**ಮಕರಂದ**—(ಆತ್ಮ) ನಾನಿವೆಲ್ಲವನ್ನೂ ಈ ನನ್ನ ಎರಡು ಕಣ್ಣುಗಳಿಂದಲೂ ನೋಡಿ ಎರಡು ಕಿವಿಗಳಿಂದಲೂ, ಕೇಳಿ ಹೊಟ್ಟೆ ಹುಣ್ಣು ಹುಣ್ಣಾಗುವಂತೆ ಹದಿನಾರು ಹಲ್ಲನ್ನೂ ಬಿಟ್ಟುಕೊಂಡು ಬಾಯಿತುಂಬಾ ನಕ್ಕೆನು.

**ಕೃಷ್ಣ**—ಅಣ್ಣಾ ಈಗ ರಾವಣನು ಎಲ್ಲಿರುವನು ?

**ಬಲರಾಮ**—ನಮ್ಮ ಉಪವನದ ಶಿಲಾಮಂಟಪದಲ್ಲಿರುವನು.

**ಕೃಷ್ಣ**—ನಾನು ನಂಬಲಾರೆನಪ್ಪಾ !

**ಬಲರಾಮ**—ನಾನು ಹೇಳುವ ಮಾತೊಂದನ್ನೂ ನೀನು ನಂಬುವುದೇ ಇಲ್ಲ.

**ಕೃಷ್ಣ**—ನೀನು ನಂಬುವ ಮಾತುಗಳನ್ನು ಹೇಳುವುದೇ ಇಲ್ಲ!

**ಬಲರಾಮ**—ಹೋಗಲಿ ಬಿಡು. ಇದು ನಿನಗೆ ಹುಡುಗಾಟವಾಗಿರುವುದು. ನಿನ್ನಿಷ್ಟಬಂದಂತೆ ಮಾಡು; ನಾನೀಗಲೇ ಹೋಗಿ ಆ ಶಿಲಾಮಂಟಪದಲ್ಲಿರುವ ಆ ನೀಚರಾವಣನನ್ನು ಧ್ವಂಸಮಾಡಿ ಬರುವೆನು.

**ಕೃಷ್ಣ**—(ಆತ್ಮ) ಈಗ ನಾನು ಸುಮ್ಮನಿದ್ದರೆ ಅನರ್ಥವಾಗುವುದು. (ಪ್ರಕಾಶಂ) ಅಣ್ಣಾ! ಹಾಗಾದರೆ ನಡೆ; ನಾನೂ ಬರುವೆನು. ಆ ರಾವಣನನ್ನು ನೋಡಬೇಕೆಂಬ ಕುತೂಹಲವು ನನಗೂ ಬಹಳವಾಗಿರುವುದು.

**ಬಲರಾಮ**—ಸುಮ್ಮನೆ ವಿನೋದ ನೋಡಲು ಬರುವ ವಿಚಾರವಲ್ಲವಯ್ಯಾ ! ಆ ರಾವಣನೇನು ಸಾಮಾನ್ಯನಲ್ಲ. ಕೈಯ್ಯಲ್ಲಿ ಆಯುಧವನ್ನು ತೆಗೆದುಕೋ!

**ಕೃಷ್ಣ**—ಆಯುಧವಿಲ್ಲದಿದ್ದರೆ ತಾನೇ ಅವನು ನನ್ನನ್ನು ಏನು ಮಾಡಬಲ್ಲನು ?

**ಬಲರಾಮ**—ಒಳ್ಳೆಯ ಹುಡುಗ ಸಹವಾಸವಾಯಿತೇ !

**ಕೃಷ್ಣ**—ಅಣ್ಣಾ ! ನೀನು ಕೋಪಿಸಬೇಡ. ಬಾ ಹೋಗೋಣ. ನನ್ನ ಆಯುಧಗಳನ್ನು ತಂದೇ ಇರುವೆನು.

**ಬಲರಾಮ**—ಸರಿ. ಸಂತೋಷ. ಬಾ! ಅಲ್ಲಿಮಾತ್ರ ಉದಾಸೀನನಾಗಬೇಡ.

(ಹೋಗುವರು.)

## ದೃಶ್ಯ ೧೦ ಉಪವನದ ಶಿಲಾಮಂಟಪ ಪ್ರಾಂತ್ಯ.

(ಮನ್ಮಥನೂ ದೇವೇಂದ್ರನೂ ಶಚೀದೇವಿಯೂ ಪ್ರವೇಶಿಸುವರು).

**ದೇವೇಂದ್ರ**—ಪ್ರಿಯೇ ! ಶಚೀದೇವೀ, ಶ್ರೀಕೃಷ್ಣಪರಮಾತ್ಮನಿಗೂ ನಮಗೂ ಕಲಹವನ್ನು ತಂದಿಟ್ಟು ನನಗೆ ಅವಮಾನಮಾಡಿದ ನಾರದಮುನಿಯು ಈಗ ಈ ಶಿಲಾಮಂಟಪದಲ್ಲಿ ಸಿಕ್ಕಿಬಿದ್ದಿರುವನು. ಸನ್ಯಾಸಿ ರಾವಣನೆಂಬ ಭ್ರಾಂತಿಯಿಂದ ಬಲರಾಮನು ಆತನನ್ನು ಹಿಡಿದು ಶಿಕ್ಷಿಸಲು ಬರುತ್ತಿರುವನು. ಈಗ ಒಳ್ಳೆಯ ವಿನೋದವಾಗುವುದು !

**ಶಚೀದೇವಿ**—ಪ್ರಿಯಾ ! ಇದು ದ್ವಾಪರಯುಗವಲ್ಲವೇ ! ತ್ರೇತಾಯುಗದಲ್ಲಿ ಮಡಿದ ರಾವಣನು ದ್ವಾಪರದಲ್ಲಿ ಹೇಗೆ ಬರುವನೆಂದು ಬಲರಾಮಾದಿಗಳು ಆಲೋಚಿಸಲಿಲ್ಲವೇ !

**ಇಂದ್ರ**—ಪ್ರಿಯೇ ! ಮಧುಪಾನ ಮತ್ತನಾದ ಬಲರಾಮನಿಗೆ ಆ ಆಲೋಚನೆಯು ಹೇಗೆ ಬಂದೀತು! ಇದಕ್ಕಾಗಿಯೇ ಆತನಿಗೆ ಬುದ್ಧಿಯನ್ನು ಕಲಿಸಲು ಸರ್ವಚೈತನ್ಯಾತ್ಮಕನಾದ ಶ್ರೀಕೃಷ್ಣನು ಎಲ್ಲರಿಗೂ ತನ್ನ ಮಾಯೆಯನ್ನು ಮುಚ್ಚಿ ಇವರೆಲ್ಲರನ್ನೂ ಹೀಗೆ ಕುಣಿಸುತ್ತಿರುವನು.

**ಶಚೀದೇವಿ**—ಕಾಂತಾ ! ಆದರೂ ಶ್ರೀಕೃಷ್ಣಪರಮಾತ್ಮನು ಮಹಾನುಭಾವನು. ಆತನ ಶಕ್ತಿಯೂ ಮಹಿಮೆಯೂ ಅದ್ಭುತವಾದುವು. ನಮ್ಮ

ಪಾರಿಜಾತವೃಕ್ಷವನ್ನಾತನಿಗೆ ಕೊಟ್ಟುದರಿಂದ ಅದು ಸಾರ್ಥಕವಾಯಿತು. ನಾವು ಕಲಹವಿಲ್ಲದಂತೆ ಅದನ್ನಾತನಿಗೆ ಅರ್ಪಿಸಿದ್ದರೆ ಚೆನ್ನಾಗಿತ್ತು.

**ಇಂದ್ರ**—ನಿಜ! ಆದರಿಂದಲೇ, ಕಲಹವನ್ನು ಹಚ್ಚಿದ ನಾರದನಿಗೆ ನಮ್ಮ ಮನ್ಮಥನು ಪಾಶವನ್ನು ಹಾಕಿ ರಗಳೆಯನ್ನು ಹಚ್ಚಿದುದು.

**ಶಚೀದೇವಿ**—ಇದು ನನಗೆ ಬಹಳ ಸಂತೋಷ. ನಿಷ್ಕಾರಣವಾಗಿ ಕಲಹವನ್ನು ಹುಟ್ಟಿಸುವವರಿಗೆ ಹೀಗೆಯೇ ಆಗಬೇಕು.

**ಮನ್ಮಥ**—ಮಹೇಂದ್ರನೇ! ನಿಮ್ಮ ಅನುಗ್ರಹದಿಂದ ನಾನು ಮಾಡಿದ ಕಾರ್ಯವು ಇಲ್ಲಿನವರೆಗೂ ಅನುಕೂಲವಾಗಿ ನೆರವೇರಿತು. ಈಗ ನಿನ್ನ ಮನಸ್ಸಿಗೆ ಸಂತೋಷವಾಯಿತಲ್ಲವೇ ?

**ಇಂದ್ರ**—ನನಗೇನೋ ನಿನ್ನ ಸಾಹಸದಿಂದ ಆ ಮುನಿಯು ಪಟ್ಟ ಅವಸ್ಥೆಯನ್ನೂ ಅವಮಾನವನ್ನೂ ನೋಡಿ ಸಂತೋಷವಾಯಿತು. ಇನ್ನೂ ಮುಂದೆ ಏನೇನು ನಡೆಯುವುದೋ ನೋಡಿ ಅನಂತರ ಹೊರಡೋಣ.

(ಬಲರಾಮಕೃಷ್ಣರು ಪರಿವಾರದೊಡನೆ ಪ್ರವೇಶಿಸುವರು.)

**ಬಲರಾಮ**—ಆಗಲಿ! ದುರಾತ್ಮಾ! ದಶಕಂಠಾ! ಈ ದ್ವಾರಕಾನಗರವೇನು ಅನಾಯಕವಾದ ಅರಣ್ಯವೆಂದು ತಿಳಿದು ಮಾಯಾರೂಪದಿಂದ ಬಂದೆಯಾ ? (ಸೇವಕರನ್ನು ನೋಡಿ) ನೀಚನು ಶಿಲಾಮಂಟಪದಲ್ಲಿ ಸಿಕ್ಕಿಬಿದ್ದಿರುವನಂತೆ! ಎಲವೋ ಭಟರಿರಾ! ಅವನನ್ನೀಗಲೇ ಎಳೆದುತನ್ನಿ; ಧ್ವಂಸಮಾಡುವೆನು.

**ಮಕರಂದ**—ನಾನು ಹೋಗಿ ರಾವಣನನ್ನು ಸೆಳೆದುಕೊಂಡು ಬರಲೇನು?

**ಬಲರಾಮ**—ಛೀ! ಅವಿವೇಕೀ! ರಾವಣನನ್ನೆಳೆದುತರುವ ಶಕ್ತಿ ನಿನಗಿರವುದೇನು? ನಿನ್ನನ್ನು ಹಿಡಿದು ಹಿಸಿಕಿ ಹಿಂಡಿಬಿಟ್ಟಾನು. ಸುಮ್ಮನಿರು. ಈ ನಮ್ಮ ವೀರಭಟರು ಅವನನ್ನು ಸೆಳೆದು ತರುವರು.

**ಸೇವಕರು**—(ಶಿಲಾಮಂಟಪದ ಕದವನ್ನು ನೂಕಿ ಹೆದರಿಕೊಂಡೋಡಿ ಬರುವರು.)

**ಬಲರಾಮ**—ಅವಿವೇಕಿಗಳಿರಾ! ಹೆದರುವುದೇತಕ್ಕೆ? ಬಾಗಿಲನ್ನು ತೆರೆಯಿರಿ. ನಾನಿರುವಲ್ಲಿ, ಆ ರಾಕ್ಷಸಾಧಮನು ಎಲ್ಲಿಗೆತಾನೇ ಹೋದಾನು! (ಒಳಗೆ) ಕೃಷ್ಣಾ! ಕೃಷ್ಣಾ!!

**ಸೇವಕ**—ಸ್ವಾಮಿಾ! ರಾವಣನು ಒಳಗೆ "ಕೃಷ್ಣಾ! ಕೃಷ್ಣಾ!" ಎಂದು ಕೂಗುತ್ತಿರುವನು.

**ಬಲರಾಮ**—ಕೃಷ್ಣನೇನು ಮಾಡಬಲ್ಲನು? ಬಲರಾಮನು ಬಂದಿರುವ ನೆಂದು ಹೇಳಿ ಆ ಹೇಡಿಯನ್ನೋಡಿಸು ತನ್ನಿ.

**ಕೃಷ್ಣ**—ಅಣ್ಣಾ! ನನ್ನನ್ನೇತಕ್ಕೆ ಕೂಗುವನೋ ವಿಚಾರಿಸಲೇ?

**ಬಲರಾಮ**—ಮಹಾರಾಯಾ! ನೀನು ಬಹಳ ದುಡುಕುವ ಮನುಷ್ಯನು; ಅವನ ಕೈಗೆ ಸಿಕ್ಕಿಬಿಟ್ಟೀಯೆ! ಎಚ್ಚರಿಕೆ.

**ಕೃಷ್ಣ**—ಹಾಗೆಯೇ ಆಗಲಿ. (ಮಂಟಪದ ಬಾಗಿಲನ್ನು ತಟ್ಟಿ) ಸ್ವಾಮಿಾ! ಯೋಗೀಶ್ವರರೇ! ನಾನು—ಕೃಷ್ಣನು ಬಂದಿರುವೆನು; ದಯವಿಟ್ಟು ಬಾಗಿಲನ್ನು ತೆರೆಯಬೇಕು.

**ನಾರದ**—ಕೃಷ್ಣಾ! (ಬಾಗಿಲನ್ನು ತೆರೆದು ಓಡಿ ಬಂದು ಕೃಷ್ಣನನ್ನಪ್ಪಿಕೊಳ್ಳುವನು.)

**ಬಲರಾಮ**—ಅಯ್ಯೋ! ಅಯ್ಯೋ! ಇನ್ನೇನು ಗತಿ! ರಾವಣನು ಕೃಷ್ಣ ನನ್ನು ಹಿಡಿದುಕೊಂಡು ಬಿಟ್ಟನು. ಮುಂದೆ ಗತಿಯೇನು!

೪೪ (ಎಲ್ಲರೂ ನಾರದನನ್ನು ಹಿಡಿದೆಳೆದಾಡುವರು.)

**ನಾರದ**—ಅಯ್ಯೋ! ಅಯ್ಯೋ! ಬಲರಾಮಾ! ಬಲರಾಮಾ! ನಾನು ನಾರದನು! ನಾರದನು! ಬಿಡು ಬಿಡು ನನ್ನನ್ನು ಬಿಡು.

**ಕೃಷ್ಣ**—ಅಣ್ಣಾ! ನೋಡು; ಇವರು ನಿಜವಾಗಿಯೂ ನಾರದರು.

**ಬಲರಾಮ**—ಛೀ! ನೀಚರಾವಣ! ಪ್ರಾಣವನ್ನುಳಿಸಿಕೊಳ್ಳಲು ಈ ರೀತಿ ಸುಳ್ಳನ್ನು ಹೇಳುವೆಯಾ? (ನೋಡಿ) ಅಹುದು. ನಾರದರು! ಇವರು ನಾರದರು!! (ಆಲೋಚಿಸಿ) ಓಹೋ! ರಾಕ್ಷಸರು ಮಾಯಾವಿಗಳು, ಕಾಮರೂಪಿಗಳು, ಬೇಕಾದಾಗ ಬೇಕಾದ ರೂಪಗಳನ್ನು ಧರಿಸಬಲ್ಲರು.

ಆದುದರಿಂದ ಇವನು ರಾವಣನೇ ! ನಿಜವಾಗಿಯೂ ರಾವಣನೇ ! ಪ್ರಾಣ ರಕ್ಷಣೆಗಾಗಿ ನಾರದರಂತೆ ವೇಷಹಾಕಿಕೊಂಡು ಇಲ್ಲಿಗೆ ಬಂದಿರುವನು. ನಾನೀಗಲೇ ಇವನನ್ನು ವಧಿಸದೆ ಬಿಡಲಾರೆನು. (ಹಿಡಿಯಲು ಹೋಗುವನು.)

**ಕೃಷ್ಣ**—ಅಣ್ಣಾ ! ಏನಿದು ಹುಚ್ಚು ! ಇವರು ನಾರದರು. ನಿಜವಾಗಿಯೂ ನಾರದರು. ಬಿಡು. ಶಾಂತನಾಗು.

**ಬಲರಾಮ**—ಹುಚ್ಚೇ ? ಯಾರಿಗೆ ಹುಚ್ಚು ? ಇವನು ರಾವಣನಲ್ಲವೆನ್ನುವ ನಿನಗೆ ಹುಚ್ಚು. ಸಾಕು ಸುಮ್ಮನಿರು. ಈ ವಿಷಯದಲ್ಲಿ ನೀನು ಪ್ರವೇಶಿಸ ಬೇಡ ! ನಿನಗೆ ಹಿಂದುಮುಂದಾಲೋಚನೆಗಳು ತಿಳಿಯುವುದಿಲ್ಲ. ನೀನು ಪಹಿಸಿಕೊಂಡು ಮಾತನಾಡಬೇಡ. ಈ ಅವಿವೇಕಿಯು ಭ್ರಷ್ಟರಾವಣನು, ನಿನ್ನ ಪತ್ನಿಯಾದ ರುಕ್ಮಿಣಿಗೆ ಮಾಡಿದವಮಾನವನ್ನೂ, ಲೆಕ್ಕಿಸದೆ, ಉದಾ ಸೀನಮಾಡಿ ಇನ್ನೂ ಇವನ ಪಕ್ಷವಾಗಿಯೇ ಮಾತನಾಡುವೆಯಲ್ಲಾ ! ನಾನೇನೆಂದು ಹೇಳಲಿ ! ಸಾಕು. ನಾನಿವನನ್ನು ಬಿಡಲೊಲ್ಲೆನು.

**ಕೃಷ್ಣ**—ಅಣ್ಣಾ ! ಹಾಗಾದರೆ ರುಕ್ಮಿಣಿಯನ್ನು ಬರಮಾಡಿ ವಿಚಾರಿಸುವ. ಇವರೇ ರಾವಣನೆಂದು ಆಕೆ ಹೇಳಿದರೆ ಅನಂತರ ನೀನಿವರನ್ನು ಶಿಕ್ಷಿಸು.

**ಬಲರಾಮ**—ಆಗಬಹುದು. ಕರೆಯಿಸು. ಯಾರಲ್ಲಿ ! ಅಂತಃಪುರದ ಸ್ತ್ರೀಯ ರನ್ನು ಕರೆದುಕೊಂಡು ಬನ್ನಿ.

**ಚಾರ**—(ಹೋಗಿ ರುಕ್ಮಿಣೀ ಸತ್ಯಭಾಮಾದಿ ಸ್ತ್ರೀಯರನ್ನು ಕರೆತರುವನು.)

**ಕೃಷ್ಣ**—ರುಕ್ಮಿಣೀ ! ಈತನೇನೋ ! ನೀನು ನೋಡಿದ ರಾವಣನು ?

**ರುಕ್ಮಿಣಿ**—ಇವರಲ್ಲ. ಇವರು ನಾರದರು. ಆತನು ಬೇರೆ.

**ಬಲರಾಮ**—ನೋಡಿದೆಯೋ ! ಕೃಷ್ಣಾ ! ಇವನು ಕಾಮರೂಪಿ. ತನ್ನ ರೂಪ ವನ್ನು ಮರೆಸಿಕೊಂಡು ನಾರದರಂತೆ ವೇಷಧಾರಿಯಾಗಿರುವನು.

**ಕೃಷ್ಣ**—(ಆತ್ಮ) ಇನ್ನೇನು ಗತಿ ! ಸದ್ಯಕ್ಕೆ ಏನನ್ನೋ ಮಾಡಲು ಹೋಗಿ ಏನೋ ಆಯಿತಲ್ಲಾ ! ಈ ಮುನಿಯನ್ನು ಈತನೇನು ಮಾಡಿಬಿಡುವನೋ ಕಾಣೆನಲ್ಲಾ ! (ಪ್ರಕಾಶ) ಅಣ್ಣಾ ಇದು ಯಾವ ಯುಗವು ?

**ಬಲರಾಮ**—ಅಯ್ಯಾ ! ಕೃಷ್ಣಾ ! ನಿನ್ನ ಯುಗವೂ ನಿನ್ನ ಸಂವತ್ಸರವೂ ನಿನ್ನ ಪಂಚಾಂಗವೂ ನನಗೆ ಬೇಡ. ಸಾಕು ನಿಲ್ಲಿಸು. ಇವನು ರಾವಣನೇ ನಿಜ. ನಾನಿವನನ್ನು ಈಗಲೇ ವಧಿಸುವುದೂ ನಿಜ.

(ದೇವೇಂದ್ರ ಶಚೀದೇವಿ ಮತ್ತು ಮನ್ಮಥ ಪ್ರವೇಶಿಸುವರು.)

**ದೇವೇಂದ್ರ**—ಕಾಮಪಾಲಾ ! ನಿಲ್ಲು ನಿಲ್ಲು ! ದುಡುಕಬೇಡ ! ಇವರು ನಾರದರು ! ರಾವಣನಲ್ಲ. ಇದೆಲ್ಲವೂ ನಿಮ್ಮ ಕೃಷ್ಣನ ಮಾಯೆಯಿಂದುಂಟಾದ ವಿಚಿತ್ರವು. ರಾಮಾಯಣ ಕಥೆಯನ್ನು ಕೇಳುತ್ತಿದ್ದ ರುಕ್ಮಿಣಿಗೆ ತಾನೇ ಸೀತೆಯೆಂಬ ಭ್ರಾಂತಿಯುಂಟಾಗಿ, ಅಲ್ಲಿಗೆ ಬಂದ ನಾರದರನ್ನು ರಾವಣಸನ್ಯಾಸಿಯೆಂದು ತಿಳಿದು, ಹೆದರಿ ಮೂರ್ಛಿತಳಾದಳು. ಸೇವಕರಿಂದ ಹೆದರಿಸಲ್ಪಟ್ಟ ನಾರದರು, ದಿಕ್ಕುತೋರದೆ ಶಿಲಾಮಂಟಪದಲ್ಲಿ ಹೊಕ್ಕಿಕೊಂಡಿದ್ದರು. ಇಷ್ಟೇ ವಿಷಯವು. ನೀನು ನಿಜವೇನೆಂಬುದನ್ನು ವಿಚಾರಿಸದೆ ಹೀಗೆ ದುಡುಕಬಹುದೇ ?

**ಬಲರಾಮ**—ಪೂಜ್ಯನಾದ ದೇವೇಂದ್ರನೇ ! ಶಚೀದೇವಿಯೇ ನಿಮಗೆ ವಂದಿಸುವೆನು.

**ಇಂದ್ರ**—ನಿನಗೆ ಮಂಗಳವಾಗಲಿ.

**ಬಲರಾಮ**—(ಹಲಾಯುಧವನ್ನು ಕೆಳಗೆ ಹಾಕಿ) ಏನೋ ಕೃಷ್ಣಾ ! ಇದೇನೋ ನಿನ್ನ ತಂತ್ರವು ?

**ಕೃಷ್ಣ**—ಅಣ್ಣಾ ! ತಂತ್ರವೇನಿರುವುದು ! ಇದು ದ್ವಾಪರಯುಗವು. ರಾವಣನು ತ್ರೇತಾಯುಗದಲ್ಲಿಯೇ ಸತ್ತುಹೋದನೆಂದು ನಾನು ಹೇಳುವಷ್ಟರಲ್ಲಿಯೇ ಮದ್ಯಪಾನದ ಮಹಿಮೆಯಿಂದ ನೀನು ನನ್ನಲ್ಲಿಯೇ ಆಗ್ರಹ ಮಾಡಿದೆಯಲ್ಲಾ ! ನಾನೇನು ಮಾಡಲಿ ? ಪೂಜ್ಯರಾದ ನಾರದರು ಸಂಸಾರಸುಖವನ್ನಪೇಕ್ಷಿಸಿದರು, ರುಕ್ಮಿಣಿಯು ಸಂಧ್ಯಾಕಾಲದಲ್ಲಿ ರಾಮಾಯಣವನ್ನು ಕೇಳಬಾರದೆಂದು ಹೇಳಿದರೂ ಕೇಳದೆ "ಬಂದ ಅನರ್ಥವು ಬರಲಿ" ಎಂದಳು. ಅದಕ್ಕೆ ಹೀಗಾಯಿತು ! ನಾನೇನು

ಮಾಡಲಿ! ನೀನು ದುಡುಕಿ ಪೂಜ್ಯರ ವಿಷಯದಲ್ಲಿ ಇಷ್ಟು ಆಗ್ರಹ ಮಾಡುವೆಯೆಂದು ನಾನು ನಂಬಿರಲಿಲ್ಲ.

**ಬಲರಾಮ**—ಛೀ! ಛೀ! ಆ ನನ್ನ ಹಾಳು ಮಧುಪಾನವು ನನಗೆ ಎಂತಹ ಅಜ್ಞಾನವನ್ನು ಕವಿಸಿ, ಎಂತಹ ಅನರ್ಥವನ್ನುಂಟುಮಾಡುತ್ತಿತ್ತು! ಕೃಷ್ಣಾ! ನನಗೆ ಇಂದಿಗೆ ಬುದ್ಧಿ ಬಂತು. ಇಂದಿಗೆ ಮಧುಪಾನವನ್ನು ಬಿಟ್ಟೆನು. ಇನ್ನು ಅದನ್ನು ಸ್ಮರಿಸುವುದು ಸಹ ಇಲ್ಲ.

**ನಾರದ**—ಶ್ರೀಕೃಷ್ಣಪರಮಾತ್ಮಾ! ನೀನು ಸರ್ವಾತ್ಮಕನೂ, ಸರ್ವಚೈತನ್ಯ ಸ್ವರೂಪನೂ, ಎಂದು ಬಲ್ಲೆನಾದರೂ ನಿನ್ನ ಮಾಯೆಗೆ ನಾನು ಸಿಕ್ಕ ಲಾರೆನೆಂದು ಅಹಂಕಾರದಿಂದ ನುಡಿದಿದ್ದೆನು. ಈಗ ನಿನ್ನ ಮಾಯಾ ಪಾಶಕ್ಕೆ ಸಿಕ್ಕಿ ನೊಂದೆನು. ಸಂಸಾರಸುಖವನ್ನಪೇಕ್ಷಿಸಿದುದಕ್ಕೆ ನನಗೆ ತಕ್ಕಫಲವಾಯಿತು. ನನ್ನ ಸರ್ವಾಪರಾಧಗಳನ್ನೂ ಮನ್ನಿಸಿ ಕಾಪಾಡು. ಇನ್ನು ನಿನ್ನ ನಾಮಸ್ಮರಣೆಯೊಂದಲ್ಲದೆ ಬೇರೆ ವಿಷಯಗಳಲ್ಲಿ ನನಗೆ ಗಮನವು ಬೀಳದಂತೆ ಅನುಗ್ರಹಿಸು.

**ರುಕ್ಮಿಣಿ**—ಪ್ರಾಣಕಾಂತಾ! ನನ್ನ ಮೂರ್ಖತನಕ್ಕೆ ತಕ್ಕ ಫಲವಾಯಿತು. ನನ್ನಪರಾಧವನ್ನು ಮನ್ನಿಸು.

**ಸತ್ಯಭಾಮೆ**—(ಆತ್ಮ) ಈಗ ನನಗೆ ಸಂತೋಷವಾಯಿತು.

**ದೇವೇಂದ್ರಾದಿಗಳು**—ಪೂಜ್ಯರಾದ ನಾರದ ಮಹರ್ಷಿಗಳಿಗೆ ವಂದಿಸುವೆವು.

**ನಾರದ**—(ತಲೆತಗ್ಗಿಸಿ) ನಿಮಗೆ ಮಂಗಳವಾಗಲಿ.

**ಇಂದ್ರಾದಿಗಳು**—ಶ್ರೀಕೃಷ್ಣಪರಮಾತ್ಮನೇ ನಿನ್ನ ಲೀಲೆಯನ್ನು ನೋಡಿ ಅತ್ಯಾನಂದಭರಿತರಾದೆವು.

**ಕೃಷ್ಣ**—ದೇವೇಂದ್ರನೇ, ನಾರದ ಮಹರ್ಷಿಗಳೇ, ಲೋಕದಲ್ಲಿ ಯಾರಾ ದರೂ ನಿಜಾಶ್ರಮಧರ್ಮಗಳನ್ನು ತ್ಯಜಿಸಿ ವರ್ತಿಸಲು ಇಷ್ಟಪಟ್ಟರೂ, ನಿಷ್ಕಾರಣ ಕಲಹಗಳನ್ನು ಕಲ್ಪಿಸಿದರೂ, ಹಿರಿಯರ ಮಾತುಗಳನ್ನು ಕೇಳದೆ ಹಠಹಿಡಿದರೂ, ಮತ್ತು ಮಿತಿಮೀರಿದ ವಿಷಯವಿನೋದಗಳಿಂದ ಮತ್ತ

ರಾದರೂ, ತಾವೇ ದೊಡ್ಡವರೆಂಬ ಅಹಂಕಾರದಿಂದ ವರ್ತಿಸಿದರೂ ಇಂತಹ ಅನರ್ಥಗಳಾಗುವುವೆಂದು ಪ್ರತ್ಯಕ್ಷವಾಗಿ ತೋರಲು, ನಾನೀ ರೀತಿ ಕಥೆಯನ್ನು ಕಲ್ಪಿಸಿದೆನು. ಆದುದರಿಂದ ನೀವು ಇನ್ನು ಮನಸ್ಸಿನ ಸಂದೇಹಗಳನ್ನು ಬಿಟ್ಟು ಸಂತೋಷವಾಗಿರಬೇಕಾದುದೇ ನನ್ನಭಿಮತವು. ಮಹೇಂದ್ರಾ! ನೀನೂ ಮನ್ಮಥನೂ ಮಾಡಿದ ಪ್ರಯತ್ನವು ನನಗೆ ಹಿತಕರವಾಗಿದ್ದ ಕಾರಣ ನಾನು ಆ ಕಥೆಯನ್ನೇ ವೃದ್ಧಿಪಡಿಸಿದೆನು.

**ದೇವೇಂದ್ರ**—ಮಹಾನುಭಾವಾ! ಸಕಲ ಲೋಕಗಳೂ ನಿನ್ನ ಇಚ್ಛೆಯಿಂದ ನಡೆಯುತ್ತಿರುವಲ್ಲಿ ಅಲ್ಪರಾದ ನಮ್ಮ ಪಾಡೇನು! ನಮ್ಮ ಸರ್ವಾಪರಾಧಗಳನ್ನೂ ಮನ್ನಿಸಿ, ಇನ್ನು ನಮಗೆ ಅಮರಾವತಿಗೆ ಹೊರಡಲು ಅಪ್ಪಣೆಯನ್ನು ಕೊಡಬೇಕು.

**ಕೃಷ್ಣ**—ಬಹಳ ಸಂತೋಷ. ನಿಮ್ಮಿಷ್ಟದಂತೆ ಆಗಲಿ.

**ಇಂದ್ರ**—ನಾರದರೇ! ಇನ್ನು ಸರ್ವಾತ್ಮಕನಾದ ಶ್ರೀಕೃಷ್ಣಪರಮಾತ್ಮನನ್ನು ಸ್ತುತಿಸಿ ಸರ್ವರೂ ಮಂಗಳವನ್ನು ಪಡೆಯೋಣ.

**ಎಲ್ಲರೂ**—ಕಂ|| ಜಯರುಕ್ಮಿಣೀ ಮನೋಹರ |
ಜಯ ಜಾಂಬವತೀಪ್ರಮೋದದಾಯಕಲೀಲಾ ||
ಜಯ ಸತ್ಯಭಾಮೆಯರಸಾ |
ಜಯ ದೇವಮುನೀಂದ್ರಜಾಲ ವಂದಿತಕೃಷ್ಣಾ || ೨೩ ||

## ತೃತೀಯಾಂಕಂ

# ಶ್ರೀಕೃಷ್ಣಪಾರಿಜಾತ ನಾಟಕಂ

## ಸಂಪೂರ್ಣಂ.

---

ಕಂ|| ಸದಮಲರಕ್ತಾಕ್ಷಿಯ ಭಾ | ಷ್ಕದೆ ಶುಕ್ಲತೃತೀಯೆಯೊಳ್ ನೃಸಿಂಹನ ಕೃಪೆಯಿಂ ||
ಮುದದಿಂ ಕವಿನರಹರಿ ರಚಿ | ಸಿದನೀ ವರಪಾರಿಜಾತ ನವನಾಟಕಮಂ ||೨೪||

ಶ್ರೀಕೃಷ್ಣ

# ಪಾರಿಜಾತ

# (ಅನುಬಂಧ)

## ನಾಂದಿ

ಪುಟ ೧ ೧ ರಾಗ ಕಲ್ಯಾಣಿ—ರೂಪಕತಾಳ (ನೀದುಚರಣ ಪಂಕಜಮುಲ)

ಸೂತ್ರಧಾರ—ದೇವ ವಿಜಯ ಮಂದರಧರ-ಸುರವರಪರಿಪೂಜಿತಾಂಘ್ರಿಸರಸೀಜ ಕೃಷ್ಣ || ಪ ||

ಪಾವನ ಭುವನನಿಧಾನ-ಅರವಿಂದನಯನ | ಸೇವಕಮಂದಾರ ||

ದೇವಬೃಂದನುತಾನಂತಗುಣ | ಲಾವಣ್ಯಕಂದ-ಲಲಿತಮುಖಾರವಿಂದ || ಅ ||

ಇಂದಿರಾವಲ್ಲಭ-ಜಲದ ಸನ್ನಿಭಗೋವಿಂದ-ಜಿತಭವಬಂಧ | ಕುಂದಗೌರಮಂದ ಹಸನಾನನ | ಕಂದರ್ಪಕೋಟಿರೂಪ || ಇಂದ್ರವೈರಿಹರ | ಚಂದ್ರಾರ್ಕಲೋಚನಸಾನಂದ| ಸಾಂದ್ರಭಾಗ್ಯಪ್ರದಕರುಣ ಶ್ರೀ | ನರಹರಿಪರಮರೂಪ | ಚರಣಶರಣಭರಣ || ೧ ||

ಪುಟ ೧ ೨ ರಾಗ ಬೇಹಾಗ್—ಆದಿತಾಳ

ಇಂದ್ರಾದಿಗಳು—ಶ್ರೀ ಲೀಲಾಸುಖಭಾಗ್ಯನಿಲಯ | ಶ್ರಿತಶುಭೋದಯ |

ಪುರಾರಿವಿಜಯ | ಗಿರೀಂದ್ರತನಯಾ | ವರ ಮಹೋದಯ || ಪ ||

ಜಯ ಜಯ ಶ್ರೀಭಯಹರಣ | ಭವತರಣಾ | ನತಭರಣ || ಜ್ಞಾನಪ್ರದಾನ-ಜಯ ವಿಭೋ || ೧ || ದಿವಿಜಪಾಲನ | ನಿಟಾಲನಯನ | ವಿಲಾಸಸದನ | ವಿಶಾಲಕರುಣ | ವೇದಶಿರೋನುತಸುಗುಣ | ಸಾಧುಸುರಾರ್ಜಿತಚರಣ || ಶ್ರೀ ದಾನಶೀಲ-ಪರಶಿವ ||೨||

ಪುಟ ೨ ೩ ರಾಗ ಅಮೃತವಾಹಿನಿ—ಆದಿತಾಳ (ಶ್ರೀರಾಮುಪಾದಮಾ)

ನಾರದ—ಶ್ರೀ ಕಮಲಾಧವ | ಪ್ರಾಕಟವೈಭವ | ಲೋಕಾವನದೇವ || ಪ ||

ಸಾಗರನಿಲಯ | ಸರಸಶುಭೋದಯ | ಯೋಗಿ ಜನಮಾನಸಸಾರಸವಾಸ ||ಅ||

ಜ್ಞಾನಿಗಮ್ಯಾನಘ | ದೀನ ಸೌಭಾಗ್ಯದ | ದಾನವ ಕುಲಹರ ಶ್ರೀಧರ ||

ಆನತಜನಸುರ | ಧೇನು ಶುಭಾಕರ | ಗಾನನರ್ತನಾದಿಸುಖಲೋಲ ಸುಶೀಲ ||೧ ||

ಪುಟ ೩ ೪ ರಾಗ ಬೇಹಾಗ್—ರೂಪಕತಾಳ

ಇಂದ್ರ—ಪರವಶನಾಂ | ಪರಮಗಾನ ನರ್ತನಗಳಿಂ || ಪ ||

ಸುರವಧೂಮಣಿಯರು ಗೈದ | ಸರಸನಾಟ್ಯಸಲ್ಲೀಲೆ || ಪರಿಪರಿ ಸುಖವೆರೆದುಪಿರಿದು |
ಹರುಷವನೆಸಗಿರ್ಪುದೆನಗೆ || ೧ || ಭುವನಜಾಲದರಸಿನೋಡೆ | ವಿವಿಧವೈಭವದೊಳಿಂತು ||
ಪ್ರವರಪುಣ್ಯಶಾಲಿಯೆನಿಪ | ದಿವಿಜವರನ ಸಮನಿರುವನೆ || ೨ ||

ಪುಟ ೬ ೫ ರಾಗ ಕೇತಾರ—ಆದಿತಾಳ

ಎಲ್ಲರೂ—ಶ್ರೀ ಗಂಗಾಗಿರಿಜಾರಮಣ | ಶಂಭೋ ಪಾಹಿ || ಪ ||

ತುಂಗಶೈಲ | ಶೃಂಗವಾಸ | ಪುಂಗವೇಂದ್ರವಾಹನ || ಅ ||

ಮೌನಿಜಾಲ-ಗೀತ ವೇದ | ಗಾನಲೀನಮಾನಸ || ದೀನಪಾಲ | ದಾನಶೀಲ
ಮಾನಿತಾತ್ಮ ಶಂಕರ || ೧ ||. ಚಂದ್ರಕಾಂತ ಚಾರುರೂಪ | ಸಾಂದ್ರಲೀಲಾಭಾಸುರ ||
ಕುಂದಭಾಸ | ಮಂದಹಾಸ | ಸುಂದರಾಸ್ಯಶಂಕರ || ೨ ||

ಪುಟ ೬ ೬ ರಾಗ-ಯಮುನಾ ಕಲ್ಯಾಣಿ—ಆದಿತಾಳ

ನಾರದ—ಯಾದವಕುಲಮಣೀದೀಪ-ಜಯ ಜಯ ||

ವೇದೋದ್ಧಾರಮಹಾ | ಮಾಧವ ಸುರನುತಪಾದ ಜಯ ಜಯ || ಪ ||

ರವಿಶಶಿಲೋಚನ | ರಾಕ್ಷಸಮಥನ || ಕುವಲಯದಳಸು ಶ್ಯಾಮಲಕೋಮಲ ||೧||
ಭಕ್ತಿವಶಂಕರ | ಭಜಕ ಸುಖಂಕರ | ಮುಕ್ತಿದಾಯಕ ಘನ | ಶಕ್ತಿನಿಧಾನ || ೨ ||

ಪುಟ ೧೦ ೭ ರಾಗ ಆದಿತಾಳ

ಕೃಷ್ಣ—ಸಂತಸಮಾಂತೆನೆ ಕಾಂತೇ-ಘನಶಾಂತೆ-ಗುಣವಂತೆ-ಸುಸ್ವಾಂತೆ-ಶುಭಕಾಂತೇ ||ಪ||

ಕಾತರನೇತ್ರೇ | ಪ್ರೀತಿಗೆ ನಾನು | ಸೋತಿಹೆನೇಜಲ | ಜಾತಸುನಯನೇ || ೧ ||
ಈ ವಿಧಮುದದಿ | ಭಾವಿಸೆ ಮನದಿ ! ದೇವಿಶುಭಂ ವಿಗೆ | ಕೈವಶಮಾದುದು || ೨ ||

ಪುಟ ೧೧ ೮ ರಾಗ-ಕುರಂಜಿ—ಆದಿತಾಳ

ಜಯದಾಕ್ಷಾಯಿಣೀ | ಜ್ಞಾನಸಂದಾಯಿನೀ ||ಪ||

ಜಾತರೂಪಾಂಗೇಶ್ರೀ ಜಯ ವಿಭವಾಸ್ಪದೇ || ಅ ||

ಪರಮಮಂಗಳಮಾತೇ | ಪಾವನೇ ಸುರಗೀತೇ || ಶೀತಾಚಲಸುತೇ | ಶ್ರೀ ಶುಭದಾತೇ ||
ಕಲುಷಮೇಘಾನಿಲೆ | ಲಲಿತೆ ಶ್ಯಾಮಲೇ | ಕಲಾಧರಧರೆ | ಕಾಮಸುಖಂಕರೇ ||೧||

ಪುಟ ೧೨ ೯ ರಾಗ-ಕಲ್ಯಾಣಿ—ಆದಿತಾಳ

ಕೃಷ್ಣ—ಶೋಭಾಕರವು | ಸುರವರ ಸುಮವು || ಪ || ಈ ಭೂತಲದೊ | ಳಿಂತಹ ಸೌರಭ | ಮಾಂತಿಹ ಸುಮವಿಹುದೇ |ಶ್ರೀ ರಮಣೀ || ಅ || ಭಾಸುರಪರಮಪ್ರ | ಭಾವ ರಂಜಿತಸುಮ | ವಾಸವವೈಭವಾ | ವಾಸವಿದೆನಿಸೆ || ಲೇಸೆನೆ ನಮಗಿಂ | ದೀ ಸುಮದೊರೆತಿಹು | ದೀಸಮಯವು ಶುಭವು || ಕೇಳ್ ರಮಣೀ || ೧ ||

ರುಕ್ಮಿಣಿ—ಇಂತಹ ಕುಸುಮವ | ನಿಳೆಯೊಳಗೆಲ್ಲಿಯೂ ಕಾಂತನೆ ಕಾಣೆನಾಂ | ಕಾಮಿತಪ್ರದವಂ || ಭ್ರಾಂತಿಗೊಳಿಸುವುದು | ಸ್ವಾಂತವನೇಪರಿ | ಸಂತಸಮಾಂತಿಹೆನೈ| ಶ್ರೀರಮಣಾ || ೨ ||

ಪುಟ ೧೩ ೧೦ ರಾಗ-ಹಿಂದುಸ್ಥಾನಿಕಾಪಿ— ಆದಿತಾಳ

ನಾರದ—ಲಾಲಿಸು ಮಧುಸೂದನ | ತ್ರೈಲೋಕ್ಯಮೋಹನ | ಲೀಲಾ ವಿನೋದನ ||ಪ||
ಪೂತವೆನಿಸಿ ಪುರು| ಹೂತನಲೋಕದಿ | ಖ್ಯಾತಿಯಾಂತುದುಪಾರಿ | ಜಾತದಸುಮವು||೧||
ನೆನೆದಭಿಲಾಷೆಯ | ನನುವಿನಿಂ ಸಲಿಪುದು || ಘನತರಕುಸುಮವಿ | ದನುಪಮವೆನಿಸಿ ||೨||

ಪುಟ ೧೮ ೧೧ ರಾಗ-ಹಂಸಧ್ವನಿ— ಆದಿತಾಳ (ರಘುನಾಯಕಾ)

ನಾರದ—ಯದುನಂದನ | ಶ್ರೀನಾಥ ಜಯ ; ವ್ಯಾಸಾದಿಮೌನಿಕೃತವಂದನ || ಪ ||
ವಿಧಿವಿಷ್ಣುಶಿವಾತ್ಮಕಚೇತನ | ವೇದಾಂತವೇದ್ಯ ಜಿತಬಂಧನ || ಅ ||
ಜಗದೇಕಜನಿಸ್ಥಿತಿಕಾರಣ | ತ್ರಿಗುಣಾತ್ಮಕ ಸಂಸ್ತುತಚಾರಣ ||
ಜ್ಞಾನದಾಯಕ | ಗಾನನಾಟ್ಯಲೋಲ ದೀನಾಳಿಪಾಲ | ಶ್ರೀನಾರಸಿಂಹ || ೧ ||

ಪುಟ ೧೯ ೧೨ ರಾಗ-ಬೇಹಾಗ್—ಆದಿತಾಳ

ಬಲರಾಮ—ಆನಂದಕರ ಮಧುಮಾಸವು | ಏನೆಂಬೆ ಸುಖದಾವಾಸವು || ಪ ||
ಭೋಗಿಜನರಿಗನು | ರಾಗವ ಪೆರ್ಚಿಸಿ | ಭೋಗವಿಭವಕೆ ಸು | ಖಾಗಮಮಿಪ್ಪುದು||೧||
ರೇವತಿ—ಅಸಮಬಾಣನು ತನ್ನ | ಕುಸುಮಶರಂಗಳಿಂ | ಎಸೆವುದಕಾರಂ | ಭಿಸೆನೆರೆ ಮೆರೆವುದು || ೨ ||

ಪುಟ ೨೦ ೧೩ ರಾಗ-ಕಮಾಚ್—ಆದಿತಾಳ

ಮದಿರೆ—ಮಧುವಿದು ಮಧುರವು ಮನೋಹರ ||ಪ|| ವಿಧವಿಧ ಸುಖವನ್ನೊದಗಿಪುದು||ಪ||
ಪರಮ ಸುಖಾಕರವುಸಖಾ | ಧರದೊಳು ಸೇವಿಸು ಮನೋಜ್ಞಚರಿತ || ಅ ||
ಸುರಕುಲಕರಿದೆನಿಸಿರುವುದು ನೋಡು | ನರವರ ಸವಿಯುತೆ ಸುಖದೊಳು ಕೂಡು ||೧||

ಪುಟ ೨೦ ೧೪ ರಾಗ-ಸುರುಟಿ—ಆದಿತಾಳ

ರೇವತಿ—ಶರವಲ್ಲವೋ | ಕಾಂತಾ || ಪ ||

ಮಧುಪಾನವು | ಮಾನಾಪಹಾರಿ | ಮದವೇರಿಪ | ಮತಿಹಾನಿಕಾರಿ || ೧ ||

ನರನಾಥರು | ಪರಿಪೂತರು || ಸರಿಯಲ್ಲವೈ | ಸುರೆಯಾಟವು || ೨ ||

ಪುಟ ೨೩ ೧೫ ರಾಗ—ಆದಿತಾಳ

ಬಲರಾಮ—ಆನಂದವಿಕಾಸ ಕಾದಂಬರಿ | ಮಾನಿನಿ ಸುವೈಭವ ಮಂಜರಿ ||

ಜ್ಞಾನಿಗಳೂ | ಸೇವಿಸುವ || ಪ ||

ಪಾನವು | ಸು | ಜ್ಞಾನವು | ಸ | ನ್ಮಾನವು | ಸು | ಮ್ಮಾನವು ಸೌಭಾಗ್ಯವೇ ನೆಂಬೆನು || ೧ || ಈಕಂಗಳಿಗೆ ದೇವ | ಲೋಕವ ತೋರಿಸಲು | ಸೌಕರ್ಯಮಾವುದು ಕಾದಂಬರಿ | ನವ | ಕಾದಂಬರಿ || ಸಾರವು | ಗಂ | ಭೀರವು | ವಿ | ಸ್ತಾರವು | ಸುಖ | ಪೂರವೀನವ್ಯಕಾದಂಬರಿ || ೨ ||

ಪುಟ ೩೨ ೧೬ ರಾಗ-ಯಮುನಾ—ಆದಿತಾಳ

ನಾರದ—ಪಾವನಚರಿತ | ಶ್ರೀವಿರಾಜಿತ || ಪ || ದೇವವಿನುತ ವಸುದೇವಸುತ || ಪ ||

ಗಾನವಿಲೋಲ | ಘನುಗುಣಶೀಲ || ದೀನಕಲುಷಕುಲ ಕಾನನ ಕೀಲ | ೧ ||

ನೀರದನೀಲ | ನಾರೀವಿಲೋಲ || ಮಾರಜನಕ ಸುಕು | ಮಾರಗೋಪಾಲ || ೨ ||

ಪುಟ ೩೪ ೧೭ ರಾಗ—ತಾಳ

ಸತ್ಯಭಾಮೆ—ಕಾಂತ-ನೇಕೆ-ಬಾರನೇ-ಸಖಿ || ಪ ||

ಯುವತಿಯುದಾವಳು | ವಿವಿಧವಿಲಾಸದಿ | ಭವನದಿ ನಿಲಿಸಿಹಳವನನು ಮುದದಿ | ಕಾಂತ-ನನ್ನ-ಕಾಣದಾದನೆ || ೧ || ಪರಿಕಿಸೆ | ರುಕ್ಮಿಣೀ | ಸರಸದೆ ಭಾಮೆಯ | ಮರೆತಿರುವನೋ | ನೆರೆ ಮುರಹರನಮಮಾ || ಕಾಂತ........ || ೨ ||

ಪುಟ ೩೬ ೧೮ ರಾಗ—ತಾಳ

ಸತ್ಯಭಾಮೆ—ಇನ್ನೇತಕೀ ಜನ್ಮ | ವಿನ್ನೇತಕೀವಿಭವ |

ನನ್ನಂತರಂಗವಿದು | ದಹಿಸುತ್ತಲಿಹುದಮಮಾ || ಪ ||

ವಲ್ಲಭನಿಗೀರೀತಿ | ಯೊಲ್ಲದಿರೆ ನಾನಿನ್ನು | ನಿಲ್ಲುವೆನೆ ಪ್ರಾಣದಲಿ ನೀರಜಾಂಬಕಿಯೇ ||೧|| ಇಂದು ಭೂಷಣವೇಕೆ | ಗಂಧಪುಷ್ಪಗಳೇಕೆ | ಬೆಂದು ವಿರಹಾಗ್ನಿಯೊಳು| ನೊಂದೆನಿಂದಕಟಾ || ೨ ||

ಪುಟ ೩೮ ೧೯ ರಾಗ-ಬೇಗಡೆ—ಆದಿತಾಳ (ಅಭಿಮಾನಮು)

ಕೃಷ್ಣ—ಅತಿಕೋಪವೇನಿದು ಸತ್ಯಭಾಮೇ | ಕ್ಷಿತಿಯೊಂದಲೇತಕೆ ಪೂರ್ಣಕಾಮೇ || ಪ ||
ಮಿತಿಮೀರಿ ಶೋಕದೀರೀತಿಯೊಳ್ | ಮತಿಭ್ರಾಂತಿಯೇಕೆ ಮಾರನಪತಾಕೆ ||ಅ||
ನಿನ್ನ ಸಾರಲೀಲೆ | ಯನ್ನು ನೋಡೆ ಸಾರೆ | ನನ್ನೊಳಿಂತು ಕೋಪವೆ ಭಾಮಿನೀ ||
ನನ್ನ ಪ್ರಾಣಸಮಾನಳೆ ಬನ್ನವೇಕೆ | ನಯಗುಣಾಕರೇ | ನಾನುರೆ ಬೇಡುವೆ ||
ಸನ್ನುತಾಂಗಿ ನೀ | ಸರಸಭಾವದಿ | ನನ್ನೊಳಾಡಿ ಕೂಡೆ | ಧನ್ಯನಾಗುವೆನೆ || ೧ ||

ಪುಟ ೪೦ ೨೦ ರಾಗ-ಕಲ್ಯಾಣಿ—ಆದಿತಾಳ (ಪ್ರಣತಾರ್ತಿಹರಾಪರ)

ಕೃಷ್ಣ—ಬಿಡುಕೋಪವ ಭಾಮಿನೀಮಣೀ | ನೀಂರಾಣೀ | ಸುವಾಣೀ |ಫಣಿರಾಜವೇಣೀ || ಪ ||

ಸತ್ಯಭಾಮೆ—ಇದಬಲ್ಲೆನು ಮಾಧವ | ಸದಾ ವಿನೋದ ವಿರೋಧ ಪ್ರಮಾದಾಪರಾಧ||ಪ||
ಗುಣವಂತೆಯರೊಳ್ | ಗಣನೆಯೆ ನಾಂ | ಮಣಿವೆನು ನೀ | ಕೆಣಕದಿರೆನ್ನಂ || ೧ ||

ಕೃಷ್ಣ—ಭಾಮೆ ನಿನ್ನನಾಂ | ಭಾವಿಸುತ್ತ ಬಂದೆ | ಪ್ರೇಮವಿಲ್ಲದೆ ಭೇದತೋರುವರೇ ||

ಸತ್ಯಭಾಮೆ—ಕೋಮಲಾಂಗ ನನ್ನ | ಕೋಪದೇನು ಫಲ | ಭೂಮಿಯಲ್ಲಿ ನಾಂ |
ಪುಣ್ಯಹೀನಳಾದೆ || ೨ ||

ಪುಟ ೪೧ ೨೧ ರಾಗ-ಹಿಂದುಸ್ಥಾನಿ—ಆದಿತಾಳ

ಕೃಷ್ಣ—ಸರಸವಾಣೀ ಸ್ಮೈರಿಸೇ | ಸಾರಸಾಯತಲೋಚನೇ || ಪ ||
ಬಿಸಜನೇತ್ರೀ | ಕುಸುಮಕೆಂದೀ | ಅಸಮಕೋಪಮಾಳ್ಪರೇ || ಎಸಪೆನಾಂಸಂ |
ತಸವ ನಿನಗೆ | ಬೆಸಸು ನಿನ್ನಭೀಷ್ಟವ ||೧|| ಕೇಳು ನುಡಿಯಂ | ತಾಳು ಮುದವಂ |
ಶ್ರೀಲತಾಂಗೀ ಬೇಡುವೆ || ನೀಲಚಿಕುರೇ | ಲೀಲೆತೋರೇ | ಶೀಲವಂತೇ ಮಾನಿತೇ ||೨||
ವಿವಿಧಭೂಷಾ | ನಿವಹಮಾಂತು | ಜವದಿ ನನ್ನ ಹರ್ಷಿಸೇ || ಕುವಲಯಾಕ್ಷೀ | ಕೋಪಿ
ಸಲುನೀಂ | ತಾಪವೆನಗಿಂದಾದುದೇ || ೩ ||

ಪುಟ ೪೨ ೨೨ ರಾಗ-ಮೋಹನ—ಆದಿತಾಳ

ನಾರದ—ಸರಸಿಜಲೋಚನ | ಸಾಧುಜನಾವನ || ಸಾರದಯಕರ | ಸಾಗರಶಯನ ||ಪ||
ಸುಂದರ ಕೋಮಲಕಾಯ | ವಂದಿತ ದಿವಿಜನಿಕಾಯ | ಬಂಧವಿಮೋಚನ ಪಾವನ ||
ನಾಗಶಯನ ಗುಣಧಾಮ | ನಾಗವರದ ಶುಭಕಾಮ | ರಾಗರಹಿತ ಘನಭೋಗ ||೨||

ಪುಟ ೪೫ ೨೩ ರಾಗ—ತಾಳ

ಸುರಾಧಿಪನಗೆಲ್ವೆ | ಸಮರದಿ || ಪ ||
ದುರಂತಮದದಿಂ | ದಿರಲ್ ಸುರಪನಾ | ದುರಾಗ್ರಹಿಯನಾಂ | ಧುರಾಗ್ರಕೆಳೆವೆ ||ಅ||
ವಿಧೇಯತೆಯೊಳಿಂದು | ಕುಡದಿರೆ | ಬುಧಾವನಿಜವನು ತಾಂ || ಮದಾಂಧನಂ ರಣ |
ವಿಧಾನಕೆಳೆಯುತೆ | ಸುಧಾಶನೇಂದ್ರನ | ಮದಂ ಬಿಡಿಸುವೆನು || ೧ ||

---

# ದ್ವಿತೀಯಾಂಕಂ

ಪುಟ ೪೭ ೨೪ ರಾಗ-ಬೇಹಾಗ್—ಆದಿತಾಳ

ನಾರದ—ಶ್ರೀ ವಿನೋದವಿಶಾಲ ಗೋಪಾಲ ರಾ | ಜೀವನೇತ್ರನವವನಮಾಲ || ಪ ||
ಸಾಗರತನಯಾಸಾರವಿಲಾಸ | ಭೋಗವಿಕಾಸ ಸುಮುಹಾಸ ||
ರಾಗರಹಿತ ಮುನಿಭಾಗಧೇಯ ಶ್ರೀ | ನಾಗವರದ ಸುರನರ ಶರಣ || ೧ ||

ಪುಟ ೪೮—ಕಾಲಯವನ ಮುಖರಿಪುಸಂಹಾರ | ಕಾಳೀಯಮದಾಪಹ ಧೀರ ||
ಕಾಲವಿಜಯ ಕರುಣಾಲಯ ಸದಯ | ಪಾಲಯ ಪಾವನಯದುತನಯ || ೨ ||

ಪುಟ ೪೯ ೨೫—ರಾಗ-ಯಮುನಾ—ಆದಿತಾಳ

ಶಚೀದೇವಿ—ಮಹಿಯನರನು ಬಯಸಲಿಂತು | ಮಹಿತದೇವಸುಮಹೀಜವನು ತಾಂ ||ಪ||
ವಿಹಿತಮಾರೆ | ಸಹಿಸಲಾರೆ | ಮಹೇಂದ್ರವೈಭವ ಮಹಿಜವು ಸಾರೆ || ೧ ||
ಪರಮಫಲವ | ಭರದಿ ಕೊಡುವ | ತರುವನೀವನೆ ಸುರೇಂದ್ರನಮಮಾ || ೨ ||
ಮದಿಸಿ ನರನೀ | ವಿಧದಿ ಬಯಸೆ | ತ್ರಿದಶನಾಥನು | ವಿಧೇಯನಹನೇ || ೩ ||

ಪುಟ ೫೨ ೨೬ ರಾಗ-ಕಲ್ಯಾಣಿ—ಆದಿತಾಳ

ಶಚೀದೇವಿ—ಸುರತರುವ ನರಗೀವರೇ | ಸೌಭಾಗ್ಯದಾತಮೆನಿಸುತೆ ಮೆರೆದಿಹ || ಪ ||
ಸಾಂದ್ರಶುಭಾಕರ | ನೆಂದೆನಿಸಿರುವೀ | ಇಂದ್ರನ ತರುವನುಪೇಂದ್ರನು ಬಯಸಿರೆ.
ಕುಚೋದ್ಯವೀ | ವಿಚಾರವು | ವಿಚಿತ್ರವು || ಲೋಕವಿನ್ನು ನಗದಿರುವುದೆ || ೧ ||

ಪುಟ ೫೩ ೨೭ ರಾಗ-ಬೇಹಾಗ್—ಆದಿತಾಳ

ಶಚೀದೇವಿ—ವರಸುರರಮಣಾ | ಸುರುಚಿರತರಗುಣ | ಧುರಜಿತರಿಪುಗಣ ಕಾಂತಾ ||ಪ||
ಮದಿಸಿದನರನೊಳು | ಕದನವನೆಸಗುತ | ಮದಮಡಗಿಸಿಬಹು | ದದುನಿನಗರಿದೇ ||೧||
ಸಮರಕೆ ಸಾರದೆ | ಸಮಯವ ಕಳೆವುದೇ | ರಮಣನೆ ಪರಿಕಿಸೆ | ಪ್ರಮಾದವಲ್ಲವೆ ||೨||

ಪುಟ ೫೫ ೨೮ ರಾಗ-ಜಂಜೂಟಿಜಿಲ್ಲಾ—ಆದಿತಾಳ

ಕೃಷ್ಣ-ಸತ್ಯಭಾಮೆ—ಪಾರಿಜಾತವು | ಏಪರಿ ಮೆರೆದಿಹುದು ||
ಶಕುಂತ-ಕುಲಗಳ | ಸುಲಲಿತ | ಕಲಕಲರವರೊಳು || ಪ ||
ಸಾರಪರಿಮಳವ | ನೆರೆಚಿಮೆರೆವ | ಸರಸಸುಮವ | ಧರಿಸಿಪೊಳೆವ | ಇಂದ್ರನ | ನಂದನ |
ಕಂದವಿದೆಂದೆನೆ | ಮಂದಾರಂ ತಾಂ || ಸುಂದರಕುಸುಮ | ಬೃಂದವ ಧರಿಸಿ |
ಕುಂದದಿರ್ಪ ಸೊಬ | ಗಿಂದ ರಂಜಿಪುದು || ೧ ||
ಮನದಿಷ್ಟ | ವನು ನೀಡಿ | ಘನಮೋದ | ವನು ವಿರಚಿಸುವ || ಸುಂದರ ಸುರತರುವು |
ಸುಖಕರವು || ಮನಕ್ಕೆ | ವಿನೋದ | ವನೆಂತು ರಚಿಪುದು || ೨ ||

ಪುಟ ೫೮ ೨೯ ರಾಗ-ನವರೋಜು—ಅಟತಾಳ ಚಾಪು

ಇಂದ್ರ—ವಂದಿಪೆ ತರು | ಣೇಂದು ಶೇಖರ ದೇವ ಶಂಕರಾ || ಪ ||
ಬುಧನುತಘನ | ಸದಮಲಗುಣ | ಸಾರಪುರಹರ || ಅ ||
ವಂದಿಪೆ ನರ | ವಿಂದಲೋಚನ ಕೃಷ್ಣಶ್ರೀಧರ || ಪ ||
ಯದುಕುಲಮಣಿ | ಸದಮಲಗುಣ | ಸಾರ ಮುರಹರ || ಅ ||
ದಯಾಕರಾ | ಧರಾಧರ | ಧರಲೀಲಾ | ವರಶೀಲಾ | ಧರ್ಮಪಾಲನ || ೧ ||
ಸಾಮಗಾನಲೋಲ ಸರಸನಾಟ್ಯವೈಭವಾ || ಯಮಿಕುಲನುತ | ಶಮದಮಯುತ |
ಶತಮಖಾಶ್ರಿತಾ || ಕೃಪಾಧನಾ | ಸುಪಾವನಾ || ರಿಪುಕಾಲ | ನೃಪಜಾಲಾ |
ರ್ಚಿತಪದಾಂಬುಜ || ೨ ||

ಪುಟ ೬೧ ೩೦ ರಾಗ-ಸಾರಂಗ—ಅಟತಾಳ ಚಾಪು

ಇಂದ್ರ—ಶ್ರೀನಾಥನಾಕೃಷ್ಣ | ತಾನೆಂಬುದನೆ ಮರೆತು ||
ಏನಿಂತನರ್ಥವನು | ನಾನಿಂದುಗೈದಿಹೆನು || ಪ ||
ಕಾಮಿನೀಮಣಿಯಿಂದೆ | ಕಾಮಾಂಧಕಾರದೊಳು || ವ್ಯಾಮೋಹಕೊಳಗಾಗಿ |
ವೈಮನಸ್ಯವನಾಂತೆ || ೧ || ನಾರದನ ನುಡಿಗೇಳ್ದು | ನಾರಾಯಣನ ಜರಿದು ||
ಘೋರಪಾತಕಿಯಾದೆ | ನೀರೀತಿ ನಾನಕಟ || ೨ ||

ಪುಟ ೬೨ ೩೧ ರಾಗ—ಆದಿತಾಳ

ಜಗವನು ಜಯಿಸಿರುವೆ | ಮೆರೆಯುವೆ || ಅಗಾಧ ಶೌರ್ಯ ಬಲಯುತ ನೆನಿಸುತೆ||ಪ||
ಕುಸುಮಬಾಣದಿಂ | ದೆಸೆದು ಲೋಕಮಂ | ವಶಂಗೊಳುತೆ ಸಂ | ತಸಂದಳೆಯುತೆ ||
ವೀರ-ಧೀರ-ಶೂರನಾ | ನೆಸೆದಿಹೆನನುಪಮಸಾಹಸಿ ಮನ್ಮಥ || ೧ ||
ಮುನಿಯನಾದರೂ | ಮನವಮಲುಗಿಸುತ || ವಿನೋದಪಡುವೀ | ಮನೋಜನಿದಿರೊಳ್ ||
ಜ್ಞಾನಿಯಾ-ದರೇನು-ತಾಂ | ವನಿತೆಯಲೀಲೆಗ | ಳನು ಬಯಸುವನಲೆ || ೨ ||

ಪುಟ ೬೩ ೩೨ ರಾಗ-ಕಲ್ಯಾಣಿ—ರೂಪಕತಾಳ

ಮನ್ಮಥ—-ಪಂಚ-ಬಾಣ ಸಂದೋಹ ಬೀರಿ ಗೆಲ್ಲುವೆ || ಪ ||
ಚಂಚರೀಕಗುಣದ ಪ್ರಬಲ | ಝುಂ-ಝುಣಾ-ರವವು ಮೊರೆಯೆ || ಅ ||
ಅರವಿಂದದ | ಶರಬ್ಬಂದದೆ| ನರೆ ಬಂಧಿಸಿ ವರಮೌನಿಯ || ಭರದಿಂದಲಿತಪವನಳಿದು|
ಕರಹರಿಸುವ | ಪರಿಯುನೆಸಗಿ | ಪರಿಪರಿಯೊಳು | ಪರಿಕಿಸುವೆನು || ೧ ||
ಬೀರುತೆ ಸುಮಶರಗಳ ಶೃಂ | ಗಾರದಿ ಮುಳುಗಿಸಿ ಮುನಿಯನು || ನಾರಿಯ ಸುಖವನು
ಬಯಸುವ | ಪರಿಯಮಾಡಿ | ಹರುಷಗೂಡಿ | ಪರಿಹಸನಕೆ | ಗುರಿಯೆಸಗುವೆ || ೨ ||

---

# ತೃತೀಯಾಂಕಂ

ಪುಟ ೬೪ ೩೩ ರಾಗ—ತಾಳ

ನಾರದ—ಇಂದುಕಳಾಭಾ | ನಂದಕರ ಶ್ರೀ | ಮಂದಹಸನಮುಖ ಗೋವಿಂದ || ಪ ||
ನಂದಕುಮಾರ | ಬಂಧನಿವಾರ | ಸಿಂಧು ಶಯನ ನತಮಂದಾರ || ಅ ||
ಪೂತನಿ ಮುಖ ಬಹು | ಪಾತಕಿದಮನ | ಭೀತಿನಿವಾರಣ ಘನಕರುಣ ||
ಖ್ಯಾತಿವಿಶಾಲ | ಘನಸಮನೀಲ | ಗೀತವಿಲೋಲ | ಗೋಪಾಲ || ೧ ||

ಪುಟ ೬೪ ೩೪ ರಾಗ—ಆದಿತಾಳ

ಮನ್ಮಥ—ಮನೋಜ ಶರಗಳ ಬೀರಲು | ಮನಮುದಿರದೆಘನ| ಮುನಿವರನಿರುವನೆ || ಪ ||
ಸುಂದರೀಕಟಾಕ್ಷ ಕಿರಣಾಸ್ತ್ರಜಾಲ ಬೀರಿ ಮಾರಿ | ಅದರಿಸಿ ಮತಿಯ | ಚದರಿಸಿ
ಧೃತಿಯ | ಮುದದೆ ಬಲಿಗೆ ನವ | ವಿಧದೊಳು ಕೆಡಹುವೆ || ೧ ||

ರಂಭೆ-ಊರ್ವಶಿ—ಮಾರನಿನ್ನ ದಯದಿ | ಸಾರಿ-ಲೀಲೆತೋರಿ ಮೀರಿ || ನಾರದಮುನಿಗೆ |
ಮೀರಿದ ಮುದದಿ || ತಪಮಪಳಿದು ಮಿಗೆ | ಚಪಲತೆಜನಿಪವು || ೨ ||

ಪುಟ ೬೫ ೩೫ ರಾಗ—ಅಟತಾಳ ಚಾಪು

ನಾರದ—ಏನು ವಿನೋದವೀ ನರ್ತನಗಾನ || ಈ ನವನಾರಿಯೊಳೆನ್ನಭಿಮಾನ || ಪ ||
ಮಾನಿನಿಯಲ್ಲಾದುದೆನ್ನ ಯಧ್ಯಾನ ! ಸಾನುರಾಗವಿದಾದುದೆನ್ನ ಯಜ್ಞಾನ || ಅ ||
ಶ್ರೀಹರಿಧ್ಯಾನವದಾರಿಗೆಬೇಕು | ಮೋಹಿನಿಯರಲೀಲೆ ಯಿದ್ದರೆ ಸಾಕು || ೧ ||
ಚಪಲೆಯನಾಮವೆ | ಜಪವಾದುದಿಂದು | ತಪವದು ತರುಣಿಯ ನೆಪದಲ್ಲಿ ನಿಂದು ||
ವಿಪುಲವಿಲಾಸವನೊಂದಲು ಮುಂದು | ಸಫಲನಾನಾಗುವೆ ನಿಲ್ಲಿಗೆ ಬಂದು || ೨ ||

ಪುಟ ೬೬ ೩೬ ರಾಗ—ಆದಿತಾಳ

ನಾರದ—ಸಾರಸಮುಖಿಯರೆ | ಸಾರುವಿರೇಕೆ || ಸಾರವಿನೋದವ | ಬೀರುತಲಿರದೆ ||ಪ||
ಅಭಿನಯನಾಟ್ಯದ | ವಿಭವವ ತೋರುತೆ || ಶುಭವನು ಬೀರದೆ |
ಸುಂದರಿಯರೆ ನೀಂ || ೧ || ಪರಿಪರಿವಿಧದಪ | ಹರಿಸುತೆ ಮನವನು ತೆರಳುವಿರೇತಕೆ |
ಸುರನಾರಿಯರೇ || ೨ ||

ಪುಟ ೬೯ ೩೭ ರಾಗ—ಶಂಕರಾಭರಣ— ರೂಪಕತಾಳ

ಸತ್ಯಭಾಮೆ—ಹರುಷಮಾಂತೆನಾಂ | ಪ್ರಾಣನಾಯಕ || ವರಶುಭಾಕರ | ಪಾರಿಜಾತ
ದಿವ್ಯ ತರುವನು | ನೆರೆಪಡೆಯುತೆ ಬಲು || ಪ ||
ನಾರದನಂದೈತಂದು | ನಾರೀಜಾಲದೊಳೆನ್ನ | ಜರಿದಿರೆತಾನಾ ರೀತಿಯೊ |
ಉರೆಮರುಗಿದೆನಾಂ || ಮೀರಿ ಕೋಪವೇರಿಸಾರುತಲಿ | ಸುರಪತಿಯನು | ಪರಿಭವಿಸುತೆ |
ಸುರಕುಜವನು | ನೆರೆತಂದಿರೆ ||೧||

ಪುಟ ೭೫ ೩೮ ರಾಗ—ಆದಿತಾಳ

ನಾರದ—ಸಂತಸಮಾಂತೆನು | ಸರೋಜಲೋಚನ || ಪ ||
ಚಿಂತಾನಿವಾರಣೆ | ಯಾಂತುಮುರಹರ || ಅ ||
ಮನದಭಿಲಾಷೆಯ | ನೆನಗುರೆಸಲಿಸಿದೆ || ಘನಕರುಣಾಕರ | ಗಾನಪ್ರಿಯಹರೀ||೧||
ಕಾಮವಿತರಣಾ | ಭಾಮಾರಮಣಾ || ಪ್ರೇಮನಿಧಾನನಿ | ರಾಮಯಸುಗುಣ || ೨ ||

ಪುಟ ೭೬ ೩೯ ರಾಗ—ಅಟತಾಳ ಚಾಪು

ಮಕರಂದ—ಮುನಿ | ನಾಥರೆ ನೋಡಿರಿ | ಕೌತುಕಮಿಾವನಿ |
ಕೇತನರಾಜಿಯ | ನೀ ತೆರದಿ || ಪ ||
ಕಾತರನೇತ್ರೆಯ | ರೀತೆರದಿರುವರೋ |
ಮಾತನಾಡಿಸಿ ನೀ | ವಾತುರದಿ || ಅ ||
ಹೊಂಬಣ್ಣದಿರುವುದು | ಜಾಂಬವತಿಯ ಮನೆ | ಕಂಬಗಳಿಹುದು ರ | ತ್ನಾಂಬಿಮನೆ ||
ಬೊಂಬೆಗಳಿರುವುದು | ಬಿಂಬಾಧರೆಯಮನೆ | ಕೆಂಬಣ್ಣದಿಹುದು ಪ | ದ್ಮಾಂಬೆಮನೆ||೧||
ಮೌನಿಗಳಿಗೆ ಪರ | ಮಾನಂದವೆಸಗುವ | ಗಾನವೋಹಿನಿಯರ ಮನೆಗಳಿವು ||
ಜ್ಞಾನಿಗಳನು ಸ | ನ್ಮಾನಿಸಿ ಸೇವಿಪ | ಮಾನಿನಿ ಲೀಲಾವತಿಯ ಮನೆಯು || ೨ ||
ಅರಮನೆ ಯಿದನೋಡಿ | ನೆರೆಮನೆಯಿದನೋಡಿ | ಕಿರುಮನೆಯಿದ ನೋಡಿ |
ಸೆರೆಮನೆಯ || ವರಮೌನಿಗಳೆನೋಡಿ | ಹರುಷದಿ ನಲಿದಾಡಿ || ತರುಣೀ ಮಣಿಯ ಕೂಡಿ
ಕುಣಿದಾಡಿ || ೩ ||

ಪುಟ ೭೯ ೪೦ ರಾಗ ಜಂಜೂಟಿ—ಆದಿತಾಳ

ಕೃಷ್ಣ-ರುಕ್ಮಿಣಿ—ಎಂತಿಹುದೀವನವು | ಸ್ವಾಂತದೊಳಮಿತ |
ಸಂತಸವುದಿಸೆ | ಶಾಂತಿಯು ಪಸರಿಸಲೆಂ || ಪ ||
ಸಾರಕುಸುಮದಾ | ಸೌರಭವನು ನೆರೆ |
ಬೀರಿಸುಳಿವ ಮೃದು | ಮಾರುತನೆಸೆದಿರಲೆಂ || ಅ ||
ರುಕ್ಮಿಣಿ—ಕೀರಶಾರಿಕಾ | ವಾರದ ಕಲಕಲ | ಮೆರೆಯೆ ಮಧುಪಝೇಂ |
ಕಾರಗಳೆಸೆದಿರಲೆಂ || ೧ ||
ಕೃಷ್ಣ—ತರಳಾಕ್ಷಿ ನೋಡು | ಹರಿಣಂಗಳೆಲ್ಲ | ನೆರೆ ನೋಟವನ್ನು ಕಲಿಯಲ್ ||
ಸಾರಿ ಬಂದು | ಸೇರಿನಿಂದು | ನೀರೆನಿನ್ನ | ಓರೆನೋಟ | ನಿರುಕಿಸಿ ನಲಿವವು || ೨ ||
ರುಕ್ಮಿಣಿ—ನವಿಲಾಟವಿಂದು | ಸವಿನೋಟವಾಗಿ | ತವೆ ಮೋದವಿಾಯೆ ಮನಕೆ ||
ಶ್ರೀವಿಲಾಸ ವಾಸವೆನಿಸಿ | ಭಾವಭವನ ವನದ ತೆರದಿ | ನವವಿಧವಿಭವದೊಳೆಂ || ೩ ||

ಪುಟ ೮೩ ೪೧ ರಾಗ-ಬೇಹಾಗ್—ಆದಿತಾಳ

ರುಕ್ಮಿಣಿ—ಘನಮೋದಾಕರವು | ನಿರುಕಿಸೆ | ವನವು ಮನೋಹರವು || ಪ ||
ಲೀಲೆಯೊಳಾಡುವ | ಬಾಲಹರಿಣಗಳ | ನಾಲೋಕಿಸಲಾನಂದವು ||
ಮೇಲೆನಿಪೀಮೃಗ | ಜಾಲಕೆ ಮನವಿದು | ಸೋಲುವುದಿಂದಮಮಾ || ೧ ||

ಪುಟ ೮೪ ೪೨ ರಾಗ-ಜಂಜೂಟಿ—ಆದಿತಾಳ

ನಾರದ—ಸಂತಸವನುನಾ | ನಾಂತೆನು ದೇವೀ || ಪ ||

ಶಾಂತಗೊಳಿಸು ನನ್ನ ಸ್ವಾಂತವನ್ನರಸಿ || ಅ ||

ಅರಸಿಯೆ ನಿನ್ನ | ನರಸುತೆ ವನದಿ | ತಿರುಗುತೆ ಬಂದೆನಾಂ | ಕರುಣಿಪುದೆನ್ನ ||೧||

ಪುಟ ೮೮ ೪೩ ರಾಗ—ಆದಿತಾಳ

ಬಲರಾಮ—ಮದಾಂಧರಾವಣಾಸುರಂಗದೆಷ್ಟು ಪೌರುಷಂ || ಪ ||

ವಧಾರ್ಹನಂ ಕ್ಷಣಾರ್ಧದೊಳ್ | ಮೊದಲ್ ವಿದಾರಿಪೆ || ಅ ||

ಈ ಹಲಾಯುಧಾಗ್ರಹದಿಂದ | ದ್ರೋಹಿದೈತ್ಯನ || ಮ | ಹಾಹವಾಗ್ರದಲ್ಲಿ ಕೊಲ್ವೆ |

ಸಾಹಸಾಂಕನಾಂ || ೧ ||

ಪುಟ ೯೪ ೪೪ ರಾಗ—ಝಂಪತಾಳ

ಬಲರಾಮ—ದುರಾತ್ಮನೆನಿಪ ದಶವದನನ | ಶಿರವತರಿದು ಕೆಡಹುವೆ | ಕ್ಷಣಾರ್ಧದಿ|| ದ ||

ಸುರಮುನಿಪನ | ತೆರದೊಳು ಮಿಗೆ | ಬರುತೆ ಕಾಮರೂಪದಿ || ವಿರೋಧವೆಸಗಿ |

ತರುಣಿಯ ಬಲ | ತೆಂದೆ ಬಾಧಿಸಿರ್ಪ ಈ || ೧ ||

ಹಲಧರನತಿ | ಬಲಯುತನೆನು | ತೆಳಸದಿಂತು ಗರ್ವದಿ || ಕುಲಾಂಗನೆಯನು |

ಬಳಲಿಸಿದನ | ಕುಲವ ಸುಡುವೆನೀಕ್ಷಣ || ೨ ||

## ಮಂಗಳಂ.

---

ಪುಟ ೯೮ ೪೫ ರಾಗ—ತಾಳ

ಎಲ್ಲರೂ—ಜಯರುಕ್ಮಿಣೀ ಮನೋಹರ | ಜಯಜಾಂಬವತೀ ಪ್ರಮೋದದಾಯಕಲೀಲಾ||

ಜಯಸತ್ಯ ಭಾಮೆಯರಸಾ | ಜಯ ದಿವಿಜಮುನೀಂದ್ರಜಾಲವಂದಿತ ಕೃಷ್ಣಾ||

## ಮಂಗಳಮಸ್ತು.

---

[illegible]